# ಕನ್ನಡ ನಾಡು - ನುಡಿ - ಸಂಸ್ಕೃತಿ ಪರಂಪರೆ

**ಎಸ್.ಆರ್.ಮಳಗಿ**

ಕನ್ನಡ ನಾಡಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಪರಂಪರೆ ಭವ್ಯವಾದುದು. ಇದಕ್ಕೆ ಎರಡು ಸಾವಿರ ವರುಷಗಳಷ್ಟು ಪ್ರಾಚೀನತೆಯೂ ಇದೆ. ಈ ಪರಂಪರೆಯ ಒಂದು ಪ್ರಮುಖ ಅಂಗ ಅದರ ಭಾಷೆ ಮತ್ತು ಸಾಹಿತ್ಯ. ಇವುಗಳಿಗೂ ಹೆಚ್ಚು ಕಡಿಮೆ ಅಷ್ಟೇ ಭವ್ಯತೆ-ಪ್ರಾಚೀನತೆಗಳುಂಟು ಎನ್ನಬಹುದಾಗಿದೆ. ನಮ್ಮ ರಾಷ್ಟ್ರದ ಪ್ರೌಢ ಭಾಷೆಗಳಲ್ಲಿ ಪ್ರಾಚೀನತೆ ಮತ್ತು ಸತ್ವದ ದೃಷ್ಟಿಯಿಂದ ಸಂಸ್ಕೃತ, ತಮಿಳುಗಳ ತರುವಾಯದ ಸ್ಥಾನ ಕನ್ನಡದ್ದೇ ಎಂದು ವಿದ್ವಾಂಸರಲ್ಲಿ ಒಮ್ಮತವಿದೆ. ಕ್ರಿ.ಪೂ. 300ರ ಸುಮಾರಿಗೆ 'ಕರ್ಣಾಟ'ರ ಅಸ್ತಿತ್ವವನ್ನೂ ಕ್ರಿ.ಶ.ದ ಆರಂಭದಿಂದ ಕನ್ನಡ ಭಾಷೆಯ ಅಂಕುರಗಳನ್ನೂ ಮತ್ತು ಹಲ್ಮಿಡಿ ಶಾಸನ ಕಾಲ (ಕ್ರಿ.ಶ.450) ದಿಂದ ಕನ್ನಡ ಸಾಹಿತ್ಯೋದಯವನ್ನೂ ನಮ್ಮ ಚರಿತ್ರೆಯ ಸಂಶೋಧಕರು ಗುರುತಿಸಿದ್ದಾರೆ. ಪೂರ್ವದ ಹಳಗನ್ನಡ (ಕ್ರಿ.ಶ.ಸು. 750 ರವರೆಗೆ), ಹಳಗನ್ನಡ (ಕ್ರಿ.ಶ. 750 ರಿಂದ 1150 ರವರೆಗೆ) ನಡುಗನ್ನಡ (ಕ್ರಿ.ಶ. 1150 ರಿಂದ 1500 ರವರೆಗೆ) ಮತ್ತು ಹೊಸಗನ್ನಡ (ಕ್ರಿ.ಶ. 1500 ರಿಂದ 1850 ರವರೆಗೆ) - ಮುಂತಾದ ಹಂತಗಳಲ್ಲಿ ನಮ್ಮ ಭಾಷಾ ಸಾಹಿತ್ಯ ವಾಹಿನಿ ಒಮ್ಮೆ ಪ್ರಶಾಂತವಾಗಿ, ಒಮ್ಮೊಮ್ಮೆ ರಭಸದಿಂದ ಹರಿಯುತ್ತ ಕ್ರಮೇಣ ಶಾಖೋಪಶಾಖೆಗಳಿಂದ ಕೂಡಿಕೊಂಡು ತನ್ನ ಪಾತ್ರವನ್ನು ವಿಸ್ತರಿಸಿಕೊಳ್ಳುತ್ತ, ಕಾಲ-ಪರಿಸರಗಳಿಗನುಗುಣವಾಗಿ ಒಮ್ಮೊಮ್ಮೆ ಆಳವನ್ನು ಹೆಚ್ಚು ಕಡಮೆ ಮಾಡಿಕೊಳ್ಳುತ್ತ ವೈವಿಧ್ಯಮಯವಾಗಿ, ಸಂಪದ್ಭರಿತವಾಗಿ ಕಂಗೊಳಿಸುತ್ತ ಕನ್ನಡ ಜನತೆಯ ಜೀವನಕ್ಕೆ ಸಂಸ್ಕೃತಿಯ ಸುಖ-ಸಮೃದ್ಧಿಯನ್ನೀಯುತ್ತ ಬಂದಿದೆಯೆಂದು ಹೇಳಬಹುದಾಗಿದೆ. ಕ್ರಿ.ಶ.ಸು. 1850 ರಿಂದ ಪಾಶ್ಚಾತ್ಯ ಭಾಷಾ-ಸಾಹಿತ್ಯಗಳ ಸಂಪರ್ಕದ ಫಲವಾಗಿ ನವಗನ್ನಡವೊಂದು ರೂಪುಗೊಳ್ಳುತ್ತ ಕ್ರಿ.ಶ.ಸು. 1920 ರಿಂದ ಆಧುನಿಕ ಕನ್ನಡದ ನೂತನ ಯುಗವೊಂದು ಆರಂಭವಾಗಿದೆಯೆಂದೂ ಹೇಳುಬಹುದು. ಆಧುನಿಕ ಕನ್ನಡದಲ್ಲೂ ನವೋದಯ (1920 ರಿಂದ 1940), ಪ್ರಗತಿಶೀಲ (1940 ರಿಂದ 1950), 1950 ರಿಂದ ಈಚೆಗೆ ನವ್ಯ, ಬಂಡಾಯ, ದಲಿತ ಮುಂತಾದ ಘಟ್ಟಗಳನ್ನು ಏರಿಳಿದು, ದಾಟುತ್ತ, ಧುಮ್ಮಿಕ್ಕುತ್ತ ಕನ್ನಡ ಸಾಹಿತ್ಯವಾಹಿನಿ ಹರಿದು ಬಂದಿದೆ. ಸಾಹಿತ್ಯಾಸಕ್ತರ ಕುತೂಹಲವನ್ನು ಕೆರಳಿಸುತ್ತ, ಬುದ್ಧಿ-ಹೃದಯಗಳನ್ನು ಅರಳಿಸುತ್ತ ಸಾಗಿ ಬಂದಿದೆ, ಹಾಗೆಯೇ ಮುಂದುವರಿಯುತ್ತಲೇ ಇದೆ.

ಕನ್ನಡ ಸಾಹಿತ್ತ ಪರಿಷತ್ತು ಕ್ರಿ.ಶ. 1915 ರಲ್ಲಿ ಸ್ಥಾಪಿತವಾಗಿ ಅಂದಿನಿಂದ ಈವರೆಗೆ ಸಾಹಿತ್ಯ ಸಮ್ಮೇಲನಗಳನ್ನು ನಡೆಸಿಕೊಂಡು ಬಂದಿದೆ, ವರುಷಕ್ಕೊಂದರಂತೆ ಈ ಸಮ್ಮೇಲನಗಳನ್ನು ನಡೆಸಿಕೊಂಡು ಹೋಗುವುದು ಕನ್ನಡ ಸಾಹಿತ್ಯ ಪರಿಷತ್ತಿನ ಉದ್ದೇಶವಾಗಿದ್ದರೂ ಅನಿವಾರ್ಯ ಕಾರಣಗಳಿಂದ ಕೆಲವೊಂದು ವಾರ್ಷಿಕ ಸಮ್ಮೇಲನಗಳು ನಡೆಯಲಿಲ್ಲ. ಈ ಸಲ 58ನೆಯ ಸಮ್ಮೇಲನವು ಈ ತಿಂಗಳು ದಿ. 29, 30, 31 ಈ ಮೂರು ದಿನ ಕಲ್ಬುರ್ಗಿಯಲ್ಲಿ ನೆರವೇರಲಿದೆಯೆಂದು ಸಾರಲಾಗಿದೆ.

ನಮ್ಮ ಹಿರಿಯ ವಿದ್ವಾಂಸರಿಂದ ಸ್ಥಾಪಿತವಾದಂದಿನಿಂದ ಕನ್ನಡ ಸಾಹಿತ್ಯ ಪರಿಷತ್ತು ಅನೇಕ ವರುಷಗಳ

ಕಾಲ ಆರ್ಥಿಕ ಪರಿಸ್ಥಿತಿ ಚೆನ್ನಾಗಿಲ್ಲದಿದ್ದರೂ ತನ್ನ ಕಾರ್ಯ ಕಲಾಪಗಳನ್ನು ಸುವ್ಯವಸ್ಥಿತವಾಗಿ, ಸುಗಮವಾಗಿ ನಡೆಸುತ್ತ ಬಂದಿದೆ. ಇದು ತುಂಬ ಶ್ಲಾಘ್ಯವೇ ಆಗಿದೆ. ಈ ಹತ್ತಾರು ವರುಷಗಳಿಂದ ನಮ್ಮ ಸರಕಾರದ ಉದಾರ ಅನುದಾನಗಳಿಂದ ಪರಿಷತ್ತಿನ ಆರ್ಥಿಕ ಪರಿಸ್ಥಿತಿ ಬಹಳಷ್ಟು ಸುಧಾರಿಸಿ ಅದರ ಕಾರ್ಯವ್ಯಾಪ್ತಿಯೂ ವಿಸ್ತಾರಗೊಂಡಿದೆ, ಸಂಕೀರ್ಣಗೊಂಡಿದೆ. ಇದೂ ಹೆಮ್ಮೆಯ ಸಂಗತಿಯೇ ಆಗಿದೆ. ಆದರೆ ಇತ್ತೀಚೆಗೆ ಪರಿಷತ್ತಿನ ವ್ಯವಹಾರಗಳಲ್ಲಿ ನಡೆಯಬಾರದ್ದು ನಡೆದು ಈ ಹಿರಿಯ ಸಂಸ್ಥೆಯ ಘನತೆಗೆ ಧಕ್ಕೆ ತಟ್ಟುವಂತಾಗಿ ನಾಡಿನ ಸಾಹಿತ್ಯಾಭಿಮಾನಿಗಳ ಹೃದಯಕ್ಕೆ ಆಘಾತವುಂಟಾದುದು ತುಂಬ ಕಳವಳದ ಸಂಗತಿ. ಇದರಿಂದಾಗಿ ಹಲವಾರು ಸಾಹಿತಿಗಳು, ಸಾಹಿತ್ಯ ಪ್ರೇಮಿಗಳು ಈ ಸಲದ ಸಾಹಿತ್ಯ ಸಮ್ಮೇಲನವು ನಡೆಯಕೂಡದೆಂದೂ ಸಾರಿದ್ದುಂಟು. ಆದರೆ ಸದ್ಯದ ಪರಿಷತ್ತಿನ ಪದಾಧಿಕಾರಿಗಳೂ, ಕಲ್ಬುರ್ಗಿಯ ಸ್ವಾಗತ ಸಮಿತಿಯ ಸದಸ್ಯರೂ ಸಮ್ಮೇಲನವನ್ನು ಹಮ್ಮಿಕೊಂಡು ಕಾರ್ಯ ತತ್ಪರರಾಗಿದ್ದಾರೆಂದು ತಿಳಿದು ಬಂದಿದೆ. ನಮ್ಮ ಸರಕಾರವು ಈ ಸಮ್ಮೇಲನಕ್ಕೆಂದು ನಾಲ್ಕು ಲಕ್ಷ ರೂಪಾಯಿಗಳ ವಿಶೇಷ ಕೊಡುಗೆಯನ್ನು ನೀಡಿದ್ದಾಗಿ ಪತ್ರಿಕೆಗಳಿಂದ ತಿಳಿದು ಬಂದಿದೆ. ಹೀಗಿರುವಾಗ ಮತ್ತು ನಮ್ಮ ನಾಡಿನ ಸುಪ್ರಸಿದ್ಧ ಕವಿಗಳೂ, ಸುವಿಚಾರವಂತರೂ, ಸೂಜ್ಞ ಸದ್ಗೃಹಸ್ಥರೂ ಆಗಿರುವ ಕಾವ್ಯಾನಂದ ಶ್ರೀ ಸಿದ್ಧಯ್ಯ ಪುರಾಣಿಕರ ಅಧ್ಯಕ್ಷತೆಯಲ್ಲಿ ನೆರವೇರಲಿರುವ ಈ ಸಮ್ಮೇಲನವನ್ನು ಪುರಸ್ಕರಿಸಿ ಅದು ಯಶಸ್ವಿಯಾಗಿ ನಡೆಯುವಂತೆ ಹಾರೈಸುವುದು ಕನ್ನಡಿಗರೆಲ್ಲರ ಕರ್ತವ್ಯವೆಂದೇ ನನ್ನ ಅನಿಸಿಕೆ. ಪರಿಷತ್ತಿನ ಆಡಳಿತದ ತಪ್ಪು ಹೆಜ್ಜೆಗಳಿಂದ ಪರಿಷತ್ತಿನ ಘನತೆಗೆ ತಾತ್ಪೂರ್ತಿಕವಾಗಿ ಗ್ರಹಣ ಹಿಡಿದಂತೆ ಕಂಡುಬಂದರೂ ಕನ್ನಡ ಜನತೆ ಮತ್ತು ನಮ್ಮ ಸರಕಾರಗಳ ಸಹಯೋಗದಿಂದ ನಡೆಯಲಿರುವ ಈ ಸಾಹಿತ್ಯ ಸಮ್ಮೇಲನಕ್ಕೆ ಅಡೆ-ತಡೆಯುಂಟಾಗಕೂಡದು ಎನಿಸುತ್ತಿದೆ. ಯಾಕಂದರೆ, ನಮ್ಮ ಭಾಷೆ ಹಾಗೂ ಸಾಹಿತ್ಯಗಳ ಮತ್ತು ಇವುಗಳ ಪೋಷಣೆಗಾಗಿಯೆಂದೇ ಇರುವ ಸಂಸ್ಥೆಗಳ ಆಗು-ಹೋಗುಗಳ ಬಗ್ಗೆ ಪ್ರತಿ ವರುಷ ಮತ್ತೆ ಮತ್ತೆ ವಿವೇಚನೆ, ವಿಶ್ಲೇಷಣೆ ನಡೆಯಬೇಕಾದುದು ತೀರ ಆವಶ್ಯಕವಲ್ಲವೆ ?

ನಮ್ಮ ಸಾಹಿತ್ಯ ಸಮ್ಮೇಲನಗಳು ಜಾತ್ರೆಗಳಂತೆ ಮೂರು ದಿನ ನಡೆದು ಅನಂತರ ವಿಸ್ಮೃತಿಯ ಮರೆಯಲ್ಲಿ ಅಡಗಿ ಹೋಗುವವೆಂಬ ದೂರು ಇದ್ದೇ ಇದೆ, ಹೀಗೆ ಆಗಬಾರದು. ಸಮ್ಮೇಲನದ ಅಧ್ಯಕ್ಷರ ಭಾಷಣ ನಮ್ಮ ಭಾಷಾ-ಸಾಹಿತ್ಯಗಳ ಗತಿಗೆ ದಿಕ್ಸೂಚಿಯಾಗಬೇಕು. ನಮ್ಮ ವಿವಿಧ ಗೋಷ್ಠಿಗಳ ಚರ್ಚೆಗಳು ಚರ್ವಿತ ಚರ್ವಣವಾಗದೆ ನಮ್ಮ ಇಂದಿನ ಸಾಹಿತ್ಯ ಸಮಸ್ಯೆಗಳನ್ನು ಬಿಡಿಸಲು ನೆರವು ನೀಡಬೇಕು. ಸಮ್ಮೇಲನದ ಬಹಿರಂಗ ಅಧಿವೇಶನದ ಗೊತ್ತುವಳಿಗಳು ಸಾಹಿತ್ಯವನ್ನೊಳಗೊಂಡು ನಮ್ಮ ನಾಡಿನ ಮುನ್ನಡೆಗೆ ದಾರಿ ತೋರುವಂತಿರಬೇಕು. ನಮ್ಮ ಪುಸ್ತಕ ಪ್ರದರ್ಶನಗಳು ಮತ್ತು ನಮ್ಮ ಇತಿಹಾಸ ಹಾಗೂ ಸಂಸ್ಕೃತಿಗಳ ಹೆಜ್ಜೆಗಳ ಪ್ರದರ್ಶನಗಳು ಕನ್ನಡ ಹಾಗೂ ಕನ್ನಡೇತರ ಜನತೆಗೆ ನಮ್ಮ ನಾಡಿನ ಬಗ್ಗೆ ಮತ್ತು ನಮ್ಮ ಸಾಹಿತ್ಯ ಸಂಪತ್ತಿನ ಬಗ್ಗೆ ನಿಜವಾದ ತಿಳಿವಳಿಕೆ ನೀಡುವಂತಿರಬೇಕು. ಒಟ್ಟಿನಲ್ಲಿ ಕನ್ನಡದ ದೃಷ್ಟಿ-ಧೋರಣೆಗಳ ಬಗ್ಗೆ ಇವೆಲ್ಲವೂ ಬೆಳಕು ನೀಡುವಂತಿರಬೇಕು; ನಮ್ಮ ಜನತೆಯ ಸಂಸ್ಕೃತಿಯ ಭವ್ಯತೆಯೂ, ಅದರ ಗುಣದೋಷಗಳೂ ಪ್ರಾಮಾಣಿಕ ಚರ್ಚೆಗೊಳಗಾಗಬೇಕು.

ಸಾಹಿತ್ಯ ಮತ್ತು ಜೀವನ ಇವು ಪರಸ್ಪರ ಪೋಷಕ. ಜೀವನವು ಸತ್ವ ಭರಿತವಾಗಿದ್ದರೆ ಸಾಹಿತ್ಯ

ಅದಕ್ಕನುಗುಣವಾಗಿ ಶಕ್ತಿಯುತವೂ ಸಂಪದ್ಭರಿತವೂ ಆಗಿರುತ್ತದೆ. ಇದಕ್ಕೆ ಪ್ರತಿಯಾಗಿ ಸತ್ವಯುಕ್ತ ಸಾಹಿತ್ಯವೂ ಜೀವನಕ್ಕೆ ಕಳೆ ನೀಡುತ್ತದೆ, ಸಂಸ್ಕಾರವೀಯುತ್ತದೆ. ನಮ್ಮ ನುಡಿ ಮತ್ತು ಸಾಹಿತ್ಯ ಹಲವಾರು ಸುವರ್ಣಯುಗಗಳನ್ನು ಕಂಡಿದೆ. ಅಂದಂದಿನ ಜನಜೀವನದಲ್ಲಿಯ ವೀರಶ್ರೀ, ಧರ್ಮಶ್ರೀ, ವಿಚಾರ ವಿವೇಕಶ್ರೀಗಳೇ ಈ ಸುವರ್ಣಯುಗಗಳಿಗೆ ಮೂಲ ಕಾರಣಗಳೂ, ಪ್ರೇರಕಗಳೂ ಆಗಿದ್ದುವೆಂಬಲ್ಲಿ ಸಂದೇಹವಿಲ್ಲ. ಜನತೆಯ ಸಂಸ್ಕೃತಿ ಹಿರಿದಾಗಿರುವಂತೆ ಅದರ ಮಧ್ಯದಲ್ಲಿ ಉದ್ಭವಿಸುವ ಕವಿಗಳ ಮಟ್ಟವೂ ಉನ್ನತವಾಗಿರುತ್ತದೆ. ಜೀವನದಲ್ಲಿಯ ಏಳು ಬೀಳುಗಳಿಗನುಣವಾಗಿ ಸಾಹಿತ್ಯದಲ್ಲೂ ಏಳು-ಬೀಳುಗಳು ಕಂಡು ಬಂದಿವೆ. ಹಾಗೆಯೇ ಭಾಷಾ-ಸಾಹಿತ್ಯಗಳ ಅವನತಿ ಜೀವನದ ಅವನತಿಗೂ ಕಾರಣವಾಗುತ್ತದೆ.

ಇಂದಿನ ಸ್ವತಂತ್ರ ಭಾರತದ ಜನಜೀವನವು ಎಲ್ಲೆಲ್ಲೂ ಪಾಶ್ಚಾತ್ಯ ಸಂಸ್ಕೃತಿಯ ಗಾಳಿ ತಗಲಿ ಹೊಸ ಹೊಸ ರೂಪ ತಳೆಯುತ್ತಲಿದೆ. ಹೊಸ ಹೊಸ ದಾರಿಗಳತ್ತ ಸಾಗುತ್ತಲಿದೆ. ಕನ್ನಡ ಜನತೆಯೂ ಇದಕ್ಕೆ ಹೊರತಾಗಿಲ್ಲ. ಪಾಶ್ಚಾತ್ಯ ಸಂಸ್ಕೃತಿಯ ಅಲೆಗಳು ಸ್ವಾತಂತ್ರ್ಯ ಪೂರ್ವಕ್ಕಿಂತ ಸ್ವಾತಂತ್ರ್ಯೋತ್ತರದ ನಮ್ಮ ಜೀವನದ ಮೇಲೆ ಹೆಚ್ಚು ಬಲವತ್ತರವಾಗಿ ಅಪ್ಪಳಿಸುತ್ತಲಿವೆ. ಇದರ ಪರಿಣಾಮವಾಗಿ ಭಾರತೀಯತೆ ಮತ್ತು ಕನ್ನಡತನಗಳ ಪರಿವರ್ತನೆ ತೀವ್ರಗತಿಯಲ್ಲಿ ಸಾಗಿದೆ. ಇದರಲ್ಲಿ ಒಳಿತೆಷ್ಟೋ ಕೆಡುಕೆಷ್ಟೋ ನಿರ್ಣಯಿಸಲು ಪ್ರವಾಹಪತಿತರಾದ ನಮಗೆ ಸಾಧ್ಯವಿಲ್ಲದಂತಾಗಿದೆ! ಇಂಥ ಪರಿಸ್ಥಿತಿಯಲ್ಲಿ ನಮ್ಮ ಭಾಷೆ ಮತ್ತು ಸಾಹಿತ್ಯಗಳೆರಡೂ ಬುಡಮೇಲಾಗುತ್ತಿರುವಂತೆ ಭಾಸವಾಗುತ್ತಿದೆ. ನಮ್ಮ ಇಂದಿನ ಕಾವ್ಯ, ಕಥೆ-ಕಾದಂಬರಿ, ನಾಟಕ, ಸಾಹಿತ್ಯ ವಿಮರ್ಶೆ ಇತ್ಯಾದಿ ಗ್ರಂಥ ಸಂಪತ್ತು ತಕ್ಕ ಮಟ್ಟಿಗೆ ಹೆಚ್ಚುತ್ತಿದ್ದರೂ ಅದರ ಗುಣ ಮತ್ತು ಸತ್ವಗಳಲ್ಲಿ ಕಾಳು-ಜೊಳ್ಳುಗಳೆರಡೂ ಸಮ ಸಮವಾಗಿರುವಂತಿದೆ. ಇಂದಿನ ಎಷ್ಟೋ ಸೃಜನಾತ್ಮಕ ಹಾಗೂ ವಿಮರ್ಶನಾತ್ಮಕ ಕೃತಿಗಳ ಜಟಿಲತೆ-ವಕ್ರತೆಗಳು ಸಾಮಾನ್ಯನಿಗೆ ದಂಗುಬಡಿಸುವಂತಿದೆ. ನಮ್ಮ ನಾಡಿನಲ್ಲಿ ನೂರಕ್ಕೆ ಅರವತ್ತು ಎಪ್ಪತ್ತರಷ್ಟು ಇರುವ ಅನಕ್ಷರಸ್ಥರನ್ನಂತೂ ಈ ಸಾಹಿತ್ಯ ತಲುಪುವಂತೆಯೇ ಇಲ್ಲ. ಬಾನುಲಿ - ಟಿ.ವಿ.ಗಳೂ ಈ ಸಾಹಿತ್ಯವನ್ನು ಬಿತ್ತರಿಸುವಲ್ಲಿ ಅಸಮರ್ಥವಾಗಿವೆ. ಇನ್ನು ಅಕ್ಷರಸ್ಥರಲ್ಲೂ ಓದುಗರ ಸಂಖ್ಯೆ ಅಷ್ಟಕಷ್ಟೆ. ಇದರಿಂದ ಇಂದು ಪ್ರಕಟವಾಗುತ್ತಿರುವ ಗ್ರಂಥಗಳ ಒಂದೊಂದು ಸಾವಿರ ಪ್ರತಿಗಳೂ ಖರ್ಚಾಗಲು ಅನೇಕ ವರ್ಷಗಳ ಕಾಲ ಕಾಯಬೇಕಾಗುತ್ತದೆ. ಈ ಪರಿಸ್ಥಿತಿಗೆ ಕಾರಣಗಳೇನು? ನಮ್ಮ ನೆರೆ ರಾಜ್ಯಗಳಾಗಿರುವ ತೆಲುಗುದೇಶ, ತಮಿಳುನಾಡು, ಕೇರಳ, ಮಹಾರಾಷ್ಟ್ರಗಳಲ್ಲಿ ಇಂಥ ಪರಿಸ್ಥಿತಿ ಇಲ್ಲವಂತೆ. ಈ ಸಮಸ್ಯೆಯ ಚರ್ಚೆ 1982ರಲ್ಲಿ ಜರುಗಿದ ವಿಶ್ವ ಕನ್ನಡ ಸಮ್ಮೇಲನದಲ್ಲಿ ತಕ್ಕ ಮಟ್ಟಿಗೆ ನಡೆಯಿತಾದರೂ ಚರ್ಚೆ ಒಂದು ನಿರ್ದಿಷ್ಟ ನಿಲುಗಡೆಗೆ ಬರಲಿಲ್ಲ. ಪರಿಹಾರೋಪಾಯಗಳೂ ನಿಶ್ಚಿತಗೊಳ್ಳಲಿಲ್ಲ. ಒಂದು ಸಭೆಯಲ್ಲೂ ಒಂದು ಸಮ್ಮೇಲನದಲ್ಲೂ ಎಲ್ಲವೂ ಸಾಧಿತವಾದೀತೆಂದು ತಿಳಿದುಕೊಳ್ಳುವುದು ತಪ್ಪಾದೀತು. ಅಂತೇ ಇಂಥ ಸಮ್ಮೇಳನಗಳ ಅವಶ್ಯಕತೆ ಉಂಟು.

ಕನ್ನಡಿಗರದು ಎಂದಿನಿಂದಲೂ ಉದಾರ ಸಂಸ್ಕೃತಿ ಎಂಬ ಕೀರ್ತಿ. ಈ ಉದಾರ ಸಂಸ್ಕೃತಿಯಲ್ಲೇ ಯಾವುವೋ ದೋಷಗಳಿವೆಯೆ? ಇದ್ದರೆ ಅವುಗಳನ್ನು ಪರಿಶೋಧಿಸಿ ಅವುಗಳ ನಿವಾರಣೆಗೆ ಯತ್ನ ನಡೆಯಬೇಕು. ನಿರಂತರವಾಗಿ ಸತತವಾಗಿ ನಡೆಯಬೇಕು. ಈ ಶೋಧನೆಯ ಪರಿಣಾಮವಾಗಿ ನಮ್ಮ ಭಾಷೆ, ಸಾಹಿತ್ಯ, ಕಲೆ

ಇತ್ಯಾದಿಗಳ ಲೋಪ-ದೋಷಗಳ ಪರಿಮಾರ್ಜನೆಯೂ ಒದಗಿ ಬಂದೀತು. ಇದೆಲ್ಲದರ ಇತ್ಯರ್ಥಕ್ಕೆ ಸಾಹಿತ್ಯ ಸಮ್ಮೇಲನಗಳು ಗಂಭೀರವಾಗಿ ತೊಡಗಬೇಕಲ್ಲವೇ?

ಕವಿ-ಕೃತಿ-ಸಹೃದಯ ಅಥವಾ ಓದುಗ - ಈ ಮೂವರ ಸಾಮರಸ್ಯ - ಸಹಯೋಗಗಳಲ್ಲೆ ಸೃಜನ ಸಾಹಿತ್ಯದ ಸಫಲತೆ ಇದೆ. ಸಮರ್ಥ ಕವಿಯಿಂದಲೆ ಸಮರ್ಥ ಕೃತಿ ಹುಟ್ಟುತ್ತದೆ. ಸಮರ್ಥ ಕೃತಿ ಓದುಗನನ್ನು ಲೋಹ ಚುಂಬಕದಂತೆ ಆಕರ್ಷಿಸುತ್ತದೆ. ಇನ್ನು ಸಮರ್ಥ ಕೃತಿ ಎಂದರೆ ಎಂಥದು? ಎಂಥೆಂಥ ಸಮರ್ಥ ಕೃತಿಗಳಿಗೂ ಬೇಡಿಕೆ ಇರಬೇಕಾದಷ್ಟು ಇಲ್ಲವಲ್ಲ ಎಂಬ ಕೊರಗು ಇಂದಿನ ಹಲವಾರು ಸಮರ್ಥ ಬರಹಗಾರರಲ್ಲಿದೆಯಲ್ಲ ! ಇದಕ್ಕೆ ಕಾರಣ ಓದುಗರ ಅಸಮರ್ಥತೆಯೆ? ಆಲಸ್ಯ, ಅನಾಸ್ಥೆಗಳೆ? ಇಲ್ಲವೆ ಕೃತಿಕಾರ ಓದುಗನನ್ನು ತನ್ನ ಸಾಹಿತ್ಯದ ಮಟ್ಟಕ್ಕೆ ಎತ್ತಲಾರನೆ ? ಹಾಗಿದ್ದ ಪಕ್ಷದಲ್ಲಿ ಸಮರ್ಥವೆಂದು ಹೇಳಿಕೊಳ್ಳುವ ಕೃತಿಯ ತಿರುಳಿನಲ್ಲೊ ಸಂವಹನ ಕಲೆಯಲ್ಲೊ ಯಾವುವೋ ದೋಷವಿರಬಹುದಲ್ಲ? ಅಲ್ಲದೆ, ಸಮರ್ಥ ಓದುಗರ ಸಂಖ್ಯೆ ಹೆಚ್ಚುವಂತೆ ಮಾಡಬೇಕಾದಲ್ಲಿ ಸಾಮಾನ್ಯರ ವಾಚನಾಭಿರುಚಿ ಬೆಳೆಯುವಂತೆ ಯಾವ ಏರ್ಪಾಟುಗಳಾಗಬೇಕು? ಕವಿ ತನ್ನ ಭಾಷಾ ಶೈಲಿಯ ಕೃತಕತೆಯನ್ನು ತಿದ್ದಿಕೊಳ್ಳುವುದವಶ್ಯವೇ? ಕನ್ನಡ ನುಡಿಯ ಜಾಯಮಾನವನ್ನರಿತು ಮನ ಮುಟ್ಟುವ, ಹೃದಯ ತಟ್ಟುವ ಶೈಲಿಯ ಸಾಧನೆಗೆ ತೊಡಗಬೇಕೆ? ಈ ಕುರಿತೂ ಚರ್ಚೆ, ವಿಶ್ಲೇಷಣೆ, ಚಿಂತನ-ಮಂಥನಗಳು ನಡೆಯಬೇಕಾಗಿದೆ.

ಕನ್ನಡ ನಾಡಿನಲ್ಲಿ ಕನ್ನಡಕ್ಕೇ ಪ್ರಧಾನ ಸ್ಥಾನವಿರಬೇಕೆಂಬಲ್ಲಿ ಭಿನ್ನಾಭಿಪ್ರಾಯವಿಲ್ಲ, ಇರಕೂಡದು. ಕರ್ನಾಟಕ ರಾಜ್ಯದ ಸಕಲ ವ್ಯವಹಾರಗಳೂ ಕನ್ನಡದಲ್ಲೇ ನಡೆಯಬೇಕೆಂದು ಸರ್ಕಾರ ಯತ್ನ ನಡೆಸಿದೆ. ಆದರೆ ಸರ್ಕಾರವೊಂದರಿಂದ ಮಾತ್ರ ಈ ಯತ್ನ ನಡೆದರೆ ಸಾಲದು. ಜನತೆಯ ಬೆಂಬಲವೂ ಮನಃಪೂರ್ವಕವಾಗಿ ಇರಬೇಕು. ಕರ್ನಾಟಕದಲ್ಲಿ ನೆಲಸಿರುವವರೆಲ್ಲರೂ ಕನ್ನಡಿಗರೇ. ಅಲ್ಪ ಸಂಖ್ಯಾತರಾಗಿರುವ ಕನ್ನಡೇತರರು ಸ್ವಸಂತೋಷದಿಂದ ಕನ್ನಡ ಕಲಿತು ಕನ್ನಡಿಗರೊಂದಿಗೆ ಕನ್ನಡಿಗರಾಗಿಯೇ ಬಾಳಬೇಕಾದುದು ಎಲ್ಲರಿಗೂ ಹಿತಕಾರಿಯಾದ ದಾರಿ. ಇಲ್ಲಿ ಬೇಸರ, ಅನಾಸ್ಥೆ, ಅಸಮಾಧಾನಗಳು ತಲೆದೋರಿದರೆ ರಾಜ್ಯದಲ್ಲಿ ಘರ್ಷಣೆಗೆ ಆಮಂತ್ರಣವಿತ್ತಂತೆ. ಹಾಗೆಯೇ, ಎರಡು ಪಕ್ಷಗಳಿಗೂ ಸಮಾನವಾದ, ಯೋಗ್ಯವಾದ ಭಾಷಾ ನೀತಿಯೊಂದು ಆವಶ್ಯಕ. ಗಡಿನಾಡಿನ ಹಾಗೂ ನೆರೆ ರಾಜ್ಯ-ಪರರಾಜ್ಯಗಳ ಕನ್ನಡಿಗರಲ್ಲೂ ಕನ್ನಡೇತರರಲ್ಲೂ ಈ ಭಾಷಾ ನೀತಿ ಮನದಟ್ಟಾಗಬೇಕು ಮತ್ತು ಅದರಂತೆ ವರ್ತಿಸಬೇಕು. ಮಾತೃ ಭಾಷೆಯ ಕಲಿಕೆಗೆ ತಕ್ಕ ವ್ಯವಸ್ಥೆ ಮತ್ತು ಅನುಕೂಲತೆಗಳನ್ನು ಆಯಾ ರಾಜ್ಯ ಸರ್ಕಾರ ಒದಗಿಸಬೇಕು. ಆದರೆ ಆಯಾ ರಾಜ್ಯದ ಪ್ರಾದೇಶಿಕ ಭಾಷೆಯನ್ನು ಅಲ್ಪ ಸಂಖ್ಯಾತರು ಕಲಿಯಲೇಬೇಕೆಂಬ ಕಟ್ಟಳೆಯನ್ನು ಮನ್ನಿಸಲೇ ಬೇಕು. ಇದರಿಂದ ಕನ್ನಡಿಗರು, ಕನ್ನಡೇತರರು ಇವರುಗಳಲ್ಲಿ ಸೌಹಾರ್ದ ಬೆಳೆಯುತ್ತದೆ. ಪರಸ್ಪರರು ತಂತಮ್ಮ ನಾಡಿನ ಸಾಹಿತ್ಯ, ಇತಿಹಾಸ ಸಂಸ್ಕೃತಿ ವೈಲಕ್ಷಣ್ಯ ಇವುಗಳ ಪರಿಚಯ ಮಾಡಿಕೊಳ್ಳುವ ಅವಕಾಶ ಉಂಟಾಗುತ್ತದೆ. ಪರಿಚಯ ಗಾಢವಾದಂತೆ ಪರಭಾಷಾ ಪ್ರೇಮ ಗಟ್ಟಿಗೊಳ್ಳುತ್ತದೆ. ಎಲ್ಲ ಭಾಷೆಗಳಲ್ಲೂ ಅದರದರ ಸತ್ವ-ಸೌಂದರ್ಯ, ವೈಲಕ್ಷಣ್ಯ

ಇರುತ್ತವೆ. ಇವುಗಳನ್ನು ಅರಿತು ಆನಂದಿಸುವ ಔದಾರ್ಯ ಎಲ್ಲರಲ್ಲೂ ಉಂಟಾದಾಗಲೇ ಅದಕ್ಕೆ ಸುಸಂಸ್ಕೃತಿ ಎನ್ನಬೇಕು. ಇಂಥ ಸುಸಂಸ್ಕೃತಿಯ ವಾತಾವರಣ ಪ್ರತಿಯೊಂದು ರಾಜ್ಯದಲ್ಲೂ ಹಬ್ಬಲು ನೆರವಾಗುವಂತೆ ಎಲ್ಲ ರಾಜ್ಯಗಳಲ್ಲೂ ಪರಭಾಷಾ-ಸಾಹಿತ್ಯಗಳನ್ನು ಭಾಷಾಂತರ ರೂಪದಲ್ಲಿ ಬರಮಾಡಿಕೊಳ್ಳುವ ಏರ್ಪಾಟು ವ್ಯವಸ್ಥಿತವಾಗಿ ನಡೆಯಬೇಕು. ನಮ್ಮ ಕೇಂದ್ರ ಅಕಾಡೆಮಿ ಮತ್ತು ನ್ಯಾಶನಲ್ ಟ್ರಸ್ಟ್ ಆಫ್ ಇಂಡಿಯ ಇವು ಈ ಬಗೆಯ ಭಾಷಾಂತರ ಕಾರ್ಯ ಕೈಕೊಂಡು ಎಲ್ಲ ಭಾಷೆಗಳ ಶ್ರೇಷ್ಠ ಕೃತಿಗಳನ್ನು ರಾಷ್ಟ್ರದ ಹದಿನಾಲ್ಕೂ ಭಾಷೆಗಳಲ್ಲಿ ಭಾಷಾಂತರಿಸುವ ಯೋಜನೆಗಳನ್ನು ಕೈಕೊಂಡಿದ್ದು ಸ್ತುತ್ಯ ಉಪಕ್ರಮವಾಗಿದೆ. ಇದು ಇನ್ನಷ್ಟು ವ್ಯಾಪಕವಾಗುವಂತೆ ಪ್ರತಿ ರಾಜ್ಯದಲ್ಲೂ ಈ ಬಗೆಯ ಯೋಜನೆಗಳನ್ನು ಅಲ್ಲಲ್ಲಿಯ ಖಾಸಗಿ ಹಾಗೂ ಸರಕಾರಿ ವ್ಯಕ್ತಿಗಳೂ ಸಂಸ್ಥೆಗಳೂ ಕೈಕೊಂಡು ಭಾರತೀಯತೆ, ಮಾನವೀಯತೆ ಹೆಚ್ಚು ಹೆಚ್ಚಾಗಿ ಅಭಿವೃದ್ಧಿ ಹೊಂದುವಂತೆ ನೋಡಿಕೊಳ್ಳಬೇಕು. ಪ್ರಾಚೀನ ಕಾಲದಲ್ಲಿ ಕನ್ನಡ ನಾಡಿನ ಕವಿಗಳು ತಮ್ಮ ಉಭಯ ಭಾಷಾ ಪಾಂಡಿತ್ಯ ತ್ರಿಭಾಷಾ ಪಾಂಡಿತ್ಯಗಳನ್ನು ಸಾರ್ಥಕಗೊಳಿಸುವಂತೆ ಸ್ವಯಂ ಸ್ಫೂರ್ತಿಯಿಂದ ಸಂಸ್ಕೃತ, ಪ್ರಾಕೃತ ಭಾಷೆಗಳಿಂದ ಕನ್ನಡಕ್ಕೂ ಕನ್ನಡದಿಂದ ಈ ಭಾಷೆಗಳಿಗೂ ಅನೇಕ ಗ್ರಂಥಗಳ ಗ್ರಂಥ ಭಾಗಗಳ ಭಾಷಾಂತರ ರೂಪಾಂತರಗಳನ್ನು ಮಾಡಿದ್ದು ಸರ್ವವಿದಿತವಿದೆ. ಹಾಗೆಯೆ ಕನ್ನಡ, ತೆಲುಗು, ತಮಿಳು, ಮಲೆಯಾಳಂ, ಮಹಾರಾಷ್ಟ್ರ, ಹಿಂದೀ, ಬಂಗಾಲೀ ಭಾಷೆಗಳಲ್ಲೂ ಈ ಬಗೆಯ ಭಾಷಾಂತರ ಕಾರ್ಯ ಸ್ವಯಂ ಪ್ರೇರಿತವಾಗಿ ನಡೆಯುತ್ತ ಬಂದುದಕ್ಕೆ ನೂರಾರು ಉದಾಹರಣೆಗಳು ದೊರೆಯುತ್ತವೆ. ಪ್ರಾಚೀನ ಕಾಲದಲ್ಲಿ ಪರಭಾಷೆಗಳ ಬಗ್ಗೆ ಅನಾಸ್ಥೆಯಾಗಲಿ, ದ್ವೇಷವಾಗಲಿ ಇರಲಿಲ್ಲ. ಹೆಚ್ಚು ಭಾಷೆಗಳನ್ನು ಕಲಿತು ಅಲ್ಲಿಯ ಸಾಹಿತ್ಯದಲ್ಲಿ ಪರಿಣತಿ ಪಡೆಯುವುದು ದೊಡ್ಡ ಗೌರವದ ಮಾತೆನಿಸಿತ್ತು. ಈಗಲೂ ಇಂಥ ಉದಾರ ದೃಷ್ಟಿ-ಧೋರಣೆಗಳು ಬೆಳೆಯಬೇಕು. ಪರಸ್ಪರರನ್ನು ಆಯಾ ಸಾಹಿತ್ಯ-ಸಂಸ್ಕೃತಿಗಳ ಮೂಲಕ ಅರಿತುಕೊಂಡಾಗಲೆ ಭಾರತೀಯರೆಲ್ಲರೂ ಒಂದು ಜನಾಂಗ ಎಂಬ ಕಲ್ಪನೆ, ವಾತಾವರಣ ಹಬ್ಬುತ್ತವೆ. ಭಾಷೆಗಳು ಬೇರೆ ಬೇರೆ ಇದ್ದರೂ ಅವುಗಳಲ್ಲಿ ಅಡಗಿರುವ ಆತ್ಮ ಒಂದೇ. ಅದೇ ಭಾರತೀಯತೆ. ಇದಕ್ಕೂ ಮುಂದೆ ಹೋಗಿ ಪರ ರಾಷ್ಟ್ರಗಳಲ್ಲಿಯ ಶ್ರೇಷ್ಠ ಕೃತಿಗಳ ಅನುವಾದ ಕಾರ್ಯಕ್ಕೂ ಪ್ರೋತ್ಸಾಹವಿರಬೇಕು. ಆಂಗ್ಲ ಭಾಷೆಯನ್ನರಿತ ಭಾರತೀಯರೂ, ಕನ್ನಡಿಗರೂ ಅಲ್ಲಲ್ಲಿ ಈಗಲೂ ಫ್ರೆಂಚ್, ರಷಿಯನ್ ಮುಂತಾದ ಭಾಷೆಗಳ ಉದ್ಗ್ರಂಥಗಳನ್ನು ಆಂಗ್ಲ ಭಾಷೆಯ ಮೂಲಕ ಅರಿತು ಭಾಷಾಂತರಿಸಿದ ಉದಾಹರಣೆಗಳು ಇವೆ. ಭಾರತೀಯತೆಯ ಜತೆಗೆ ಮಾನವೀಯತೆಯನ್ನು ಅಳವಡಿಸಿಕೊಳ್ಳಲು ಸಾಹಿತ್ಯ ಕಲಿಸುತ್ತದೆ, ಹೀಗೆ ಭಾಷಾ ಪ್ರೇಮ ಪರ ಭಾಷಾ ಸೌಹಾರ್ದ ಬೆಳೆಯಲು ಎಷ್ಟು ಬಗೆಯ ಯೋಜನೆಗಳು ಕಲ್ಪಿತವಾದರೂ ಅವೆಲ್ಲ ಆವಶ್ಯಕವಾದುವೇ. ಕನ್ನಡಿಗರದು ಉದಾರ ದೃಷ್ಟಿ ಎಂದು ಈ ಮೊದಲು ಹೇಳಿದೆಯಷ್ಟೆ? ಅವರು ಪರ ರಾಜ್ಯಗಳಲ್ಲಿ ನೆಲಸಿ ಅಲ್ಲಿಯ ಭಾಷಾ-ಸಾಹಿತ್ಯಗಳನ್ನರಿತು ಅಲ್ಲಿಯ ಜನರೊಂದಿಗೆ ಮಿಳಿತರಾದುದನ್ನು ಈಗಲೂ ಕಾಣುತ್ತೇವೆ. ಹಾಗೆಯೆ ನೆರೆ ರಾಜ್ಯಗಳ ಕನ್ನಡೇತರರೆಷ್ಟೊ ನಮ್ಮ ನಾಡಿನಲ್ಲಿ ನೆಲಸಿ ಕನ್ನಡಿಗರಿಗೂ ಮಿಗಿಲಾದ ಕನ್ನಡಾಭಿಮಾನ ತಳೆದು ಕನ್ನಡದಲ್ಲಿ ಶ್ರೇಷ್ಠ ಕೃತಿ ರಚನೆ ಮಾಡಿರುವ ಉದಾಹರಣೆಗಳಿಲ್ಲವೇ? ಬೇಂದ್ರೆ, ಮಾಸ್ತಿ, ನಾ.ಕಸ್ತೂರಿ ಮುಂತಾದ ಮಹನೀಯರ ಕನ್ನಡ ಸಾಹಿತ್ಯ ಸೇವೆ

ಸಾಮಾನ್ಯವೇ? ಇಂಥವರನ್ನು ಇಲ್ಲಿ ನೆಲಸಿದ ಕನ್ನಡೇತರರು ಮಾದರಿಯಾಗಿರಿಸಿಕೊಳ್ಳಬಾರದೇ? ಇಲ್ಲಿ ನೆಲಸಿದ ಕನ್ನಡೇತರರೂ ತಂತಮ್ಮ ಮಾತೃ ಭಾಷೆಯನ್ನು ಉಳಿಸಿಕೊಂಡೂ ಇಲ್ಲಿಯ ತಮ್ಮ ಎಲ್ಲ ವ್ಯವಹಾರಗಳನ್ನೂ ಕನ್ನಡದಲ್ಲೇ ನಡೆಸುವಂಥ ಸಾಮರ್ಥ್ಯ ಪಡೆಯುವುದು ಅಸಾಧ್ಯದ ಮಾತೇನಲ್ಲ. ಪರ ರಾಜ್ಯಗಳಲ್ಲಿ ನೆಲಸಿರುವ ಎಲ್ಲ ಅಲ್ಪ ಸಂಖ್ಯಾತರರಿಗೂ ಅನ್ವಯಿಸುವ ಮಾತಿದು. ಎಲ್ಲ ಭಾಷೆಗಳೂ ಪರಸ್ಪರ ವಿನಿಮಯದಿಂದ ಪುಷ್ಟಿಗೊಂಡು ಭಾರತೀಯ ಜೀವನಕ್ಕೆ ಸುಪುಷ್ಟಿ-ಸಮೃದ್ಧಿಗಳನ್ನು ಒದಗಿಸುವಂತಾದಾಗಲೆ ಆಯಾ ಭಾಷೆಗೆ ಸಾರ್ಥಕತೆ ಉಂಟಾಗುತ್ತದೆ.

ಈ ಸಲದ ಕನ್ನಡ ಸಾಹಿತ್ಯ ಸಮ್ಮೇಲನದಲ್ಲಿ ಈ ಬಗೆಯ ಭಾಷಾ-ಸೌಹಾರ್ದ ಮತ್ತು ಕನ್ನಡ-ಕನ್ನಡೇತರ ಭಾವೈಕ್ಯ ಇವುಗಳಿಗೆ ಆಸ್ಪದವುಂಟಾಗುವಂತೆ ಚರ್ಚೆ, ವಿಚಾರ ವಿನಿಮಯ, ಚಿಂತನ ನಡೆದೀತೆಂದು ಹಾರೈಸಬಹುದೇ?

# ಕನ್ನಡ ಸಾಹಿತ್ಯ - ಹಳಗನ್ನಡ ರೀತಿಯದು

ಕನ್ನಡವು ಭಾರತದ ಅತ್ಯಂತ ಪ್ರಾಚೀನ ಭಾಷೆಗಳಲ್ಲಿ ಒಂದಾಗಿದೆ. ಸಾಹಿತ್ಯ ರೂಪ ಹಾಗೂ ವಸ್ತುಗಳಲ್ಲಿ ವಿವಿಧವೂ, ಗತಿ ಶೀಲವೂ, ಸತ್ವಯುಕ್ತವೂ ಆಗಿರುವ ಅಖಂಡ ಸಾಹಿತ್ಯ ಪರಂಪರೆಯು ಅದಕ್ಕಿದೆ. ಅದರ ಸಾಹಿತ್ಯವು ಖಚಿತವಾಗಿ ಒಂದು ಸಾವಿರ ವರುಷಗಳಿಗೂ ಮೀರಿದ ಪ್ರಾಚೀನತೆಯುಳ್ಳದ್ದು. ಯಾಕಂದರೆ, ಕನ್ನಡದ ಮೊದಲ ಉಪಲಬ್ಧ ಗ್ರಂಥವೆನಿಸಿದ ಕವಿರಾಜ ಮಾರ್ಗವು ಕ್ರಿ.ಶ. 9ನೆಯ ಶತಕದಲ್ಲಿ ರಚಿತವಾದುದು. ಅಲ್ಲದೆ, ನಂಬಲರ್ಹವಾದ ಶಾಸನಗಳ ಹಾಗೂ ಸಾಹಿತ್ಯಿಕ ಆಧಾರಗಳ ಮೇಲಿಂದ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಇನ್ನೂ ಹಿಂದಕ್ಕೆ ಎಂದರೆ 6ನೆಯ ಶತಕದವರೆಗೆ ಒಯ್ಯಲು ಸಾಧ್ಯವಿದೆ. ಬಹು ಪ್ರಾಚೀನವೂ ವಿಸ್ತಾರವೂ ವೈವಿಧ್ಯಮಯವೂ ಆಗಿರುವ ಈ ಸಾಹಿತ್ಯದ ಸಮೀಕ್ಷೆಯನ್ನು ಸ್ಥೂಲವಾಗಿ ಮತ್ತು ಸ್ವಲ್ಪದರಲ್ಲಿ ಮಾತ್ರ ಇಲ್ಲಿ ಮಾಡಬಹುದಾಗಿದೆ. ವಾಡಿಕೆಯಂತೆ-ಈ ಸಮೀಕ್ಷೆಯನ್ನು ಕಾಲಾನುಕ್ರಮವಾಗಿ ವಿಂಗಡಿಸಿ ಮಾಡುವುದು ಸಾಧ್ಯ. ಸಾಹಿತ್ಯರೂಪ ಇಲ್ಲವೆ ಭಾಷೆಯ ಅವಸ್ಥೆಗಳನ್ನು ಕುರಿತೂ ಈ ಪರಿಶೀಲನೆ ನಡೆಯಬಹುದಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯ ಎಲ್ಲ ಕಾಲ ವಿಭಾಗಗಳಲ್ಲಿ ಹಳಗನ್ನಡದಲ್ಲಿ ರಚಿತವಾಗಿರುವ ಕನ್ನಡ ಸಾಹಿತ್ಯವನ್ನು ಕುರಿತು ಈ ಲೇಖನದಲ್ಲಿ ಪರಿಶೀಲಿಸಲಿಚ್ಛಿಸುತ್ತೇನೆ. ಸ್ಥೂಲವಾಗಿ ಹೇಳಬೇಕೆಂದರೆ ಹಳಗನ್ನಡ ಸಾಹಿತ್ಯವು ಮೊದಲ ವಿಭಾಗದಲ್ಲಿ ಎಂದರೆ ಕ್ರಿ.ಶ. 6ನೆಯ ಶತಕದಿಂದ 12ನೆಯ ಶತಕದ ಮಧ್ಯದವರೆಗೆ ನಿರ್ಮಾಣವಾದುದು ; ಮತ್ತು ಆಗ ಅದು ತಳೆದ ಪ್ರಮುಖ ಸಾಹಿತ್ಯ ಪ್ರಕಾರವು ಮಾರ್ಗ ಪದ್ಧತಿಯ ಗದ್ಯ-ಪದ್ಯ ಮಿಶ್ರಿತ ಚಂಪೂ ಎಂಬುದಾಗಿತ್ತು. ಸಾಹಿತ್ಯದ ಚರಿತ್ರೆ ವಿವಿಧ ಅವಸ್ಥೆಗಳಲ್ಲಿ ಹಾಯ್ದು ಬಂದಿದೆ. ಆದರೂ ಅನಂತರದ ಕಾಲ ವಿಭಾಗಗಳಲ್ಲಿ ಇತರ ಸಾಹಿತ್ಯ ರೂಪಗಳ ಹಾಗೂ ಭಾಷಾ ಸ್ವರೂಪಗಳ ಪ್ರಾಬಲ್ಯವಿದ್ದಾಗಲೂ ಹಳಗನ್ನಡ ಚಂಪೂ ಕೃತಿಗಳ ನಿರ್ಮಾಣಕ್ಕೆ ತಡೆಯಿರಲಿಲ್ಲ. ವಸ್ತು - ಸ್ಥಿತಿ ಎಂದರೆ 17 ಮತ್ತು 18ನೆಯ ಶತಕಗಳಲ್ಲಿ ಹಳಗನ್ನಡ ಕೃತಿ ರಚನೆಯು ವಿಲಕ್ಷಣವಾಗಿ ಪುನಶ್ಚೇತನಗೊಂಡದ್ದು ಕಂಡು ಬರುತ್ತದೆ. ಆಧುನಿಕ ಕಾಲದಲ್ಲೂ ಹಳಗನ್ನಡದಲ್ಲಿ ರಚಿತವಾದ ಉತ್ತಮ ಸಾಹಿತ್ಯ ಕೃತಿಗಳು ಅಪರೂಪವಾಗಿಯಾದರೂ ಕಾಣ ದೊರೆಯುತ್ತವೆ.

ಹಲ್ಮಿಡಿಯಲ್ಲಿ ದೊರೆತ ಕ್ರಿ.ಶ. 5ನೆಯ ಶತಕದ ಶಾಸನವೇ ಅತ್ಯಂತ ಪ್ರಾಚೀನವಾದದ್ದು. ಈ ಶಾಸನದಲ್ಲಿ ಅದೇ ಬೆಳವಣಿಗೆ ಹೊಂದುತ್ತಿರುವ ಪೂರ್ವದ ಹಳಗನ್ನಡವೆಂದು ಹೆಸರಿಸಲಾದ ಹಳಗನ್ನಡ ಗದ್ಯದ ಸುಳಿವುಗಳು ಕಂಡು ಬರುತ್ತವೆ. ಈ ಶಾಸನವು ಸಾಹಿತ್ಯಿಕ ವೈಖರಿಯುಳ್ಳುದ್ದಾಗಿದ್ದು ಆ ಕಾಲದಲ್ಲಿ ಪ್ರೌಢ ಶೈಲಿಯ ಬರವಣಿಗೆ ಇತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಆದರೆ ಇದು ಸಾಹಿತ್ಯಿಕ ರಚನೆಯಾಗಿರದೆ ಹೆಚ್ಚಾಗಿ ಶಾಸನದ ದಾಖಲೆಯೇ ಆಗಿದೆ. ಹಳಗನ್ನಡದಲ್ಲಿ ನಿಜವಾದ ಸಾಹಿತ್ಯಿಕ ಅಭಿವ್ಯಕ್ತಿಯ ಮೊಟ್ಟ ಮೊದಲ ಉದಾಹರಣೆಯೆಂದರೆ ಗುಣ ಮಧುರನೆಂಬ ಮಹಾ ವ್ಯಕ್ತಿಯ ಗುಣಗಾನವನ್ನೊಳಗೊಂಡ ಒಂದು ಶಾಸನ ಪದ್ಯ. ಇದೊಂದು ಸುಂದರ ವ್ಯಕ್ತಿ ಚಿತ್ರ. ಕೆಲವೆಡೆಗಳಲ್ಲಿ ಇದರ ಅರ್ಥವು ಕ್ಲಿಷ್ಟವಾಗಿದ್ದರೂ ಬಿಗುಹಿನ ರಚನೆಯಿಂದಾಗಿ ತುಂಬಾ ಪರಿಣಾಮಕಾರಿಯಾದುದು. ಈ ಶಾಸನದ ಕಾಲವೂ ಕ್ರಿ.ಶ. 500 ರಿಂದ 555ರ

ಮಧ್ಯದ್ದೆಂದು ನಿಶ್ಚಿತವಾಗಿದೆ. ಇದರ ತರುವಾಯ ಮಾಧವನೆಂಬ ವೀರ ಪುರುಷನ ವರ್ಣನೆಯು ಹಳಗನ್ನಡದಲ್ಲಿ ರಚಿತವಾದ ತ್ರಿಪದಿ ಛಂದಸ್ಸಿನ ಮೂರು ಪದ್ಯಗಳಲ್ಲಿ ದೊರೆಯುತ್ತದೆ. ಇಲ್ಲಿಯ ಭಾಷೆಯಲ್ಲಿ ಅಲ್ಲಲ್ಲಿ ಹಳೆಯ ರೂಪಗಳ ಬಳಕೆ ಕಂಡು ಬರುತ್ತದೆ. ಈ ಶಾಸನವು ಏಳನೆಯ ಶತಕದ್ದಾಗಿದ್ದು, ಅನಂತರದ ಶತಮಾನಗಳಲ್ಲಿ ವಿಪುಲ ಸಂಖ್ಯೆಯಲ್ಲಿ ದೊರೆಯುವ ಸಾಹಿತ್ಯ ಗುಣವುಳ್ಳ ಶಾಸನಗಳಿಗೆಲ್ಲ ಇದು ಅಗ್ರಗಾಮಿ.

ಈ ಮೊದಲೇ ಉಲ್ಲೇಖಿಸಿದ ಕವಿರಾಜ ಮಾರ್ಗವು ದಂಡಿಯ ಸಂಸ್ಕೃತ ಕಾವ್ಯಾದರ್ಶವನ್ನು ಆಧರಿಸಿ ರಚಿತವಾದ ಅಲಂಕಾರಶಾಸ್ತ್ರ ಗ್ರಂಥ. ಪ್ರಾಯಶಃ ಇದು ರಾಷ್ಟ್ರಕೂಟ ವಂಶದ ಸುಪ್ರಸಿದ್ಧ ಚಕ್ರವರ್ತಿ ನೃಪತುಂಗನ ಆಸ್ಥಾನವನ್ನು ಅಲಂಕರಿಸಿದ್ದ ಒಬ್ಬ ಸೂಕ್ಷ್ಮಗ್ರಾಹಿ ಜೈನ ಪಂಡಿತನಿಂದ ರಚಿತವಾಗಿರಬೇಕು. ಕನ್ನಡದಲ್ಲಿ ಈ ಮುಂಚೆ ಬಹು ದೊಡ್ಡ ಹಾಗೂ ಸಂಪದ್ಭರಿತ ಸಾಹಿತ್ಯ ಪರಂಪರೆಯೊಂದು ಇತ್ತೆಂಬುದಕ್ಕೆ ಸುಸ್ಪಷ್ಟ ಆಧಾರಗಳು ಈ ಗ್ರಂಥದಲ್ಲಿ ದೊರೆಯುತ್ತವೆ. ಉದಾಹರಣೆಗಾಗಿ ಹಲವಾರು ಹೆಸರಾಂತ ಗದ್ಯಕಾರರ ಹಾಗೂ ಪದ್ಯಕಾರರ ಹೆಸರುಗಳು ಇಲ್ಲಿ ಉಲ್ಲೇಖನಗೊಂಡಿವೆ. ಪಳಗನ್ನಡ ಎಂಬ ಪದದ ಪ್ರಯೋಗವು ಇಲ್ಲಿ ಮೊಟ್ಟ ಮೊದಲಿಗೆ ಗೋಚರಿಸಿದ್ದು ಇದು ಉಲ್ಲೇಖಗೊಂಡ ಸಂದರ್ಭದ ಮೇಲಿಂದ ಇದಕ್ಕೂ ಮುಂಚೆ ಹಳಗನ್ನಡದಲ್ಲಿ ಬಹುಕಾಲದಿಂದ ಒಂದು ಸುವಿಖ್ಯಾತ ಸಾಹಿತ್ಯ ಪರಂಪರೆ ನೆಲಸಿತ್ತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಉಚಿತ ಸಾಹಿತ್ಯ ಶೈಲಿಯನ್ನು ಕುರಿತ ಚರ್ಚೆಯ ಸಂಬಂಧದಲ್ಲಿ ವ್ಯಕ್ತವಾದ ವಿಚಾರಗಳು ತುಂಬಾ ಕುತೂಹಲಕಾರಿಯಾಗಿವೆ. "ಬೆಳೆಯುತ್ತಿರುವ ಭಾಷಾ ಶಾಸ್ತ್ರದ ಅರಿವು ಸಾಲದ ಕೆಲವರು ಸುಪ್ರಸಿದ್ಧ ಪ್ರಾಚೀನ ಕಾವ್ಯಗಳೇ ಆಧುನಿಕ ಕಾವ್ಯ ಶೈಲಿಗೆ ಲಕ್ಷಣವೆಂದು ತಪ್ಪು ಭಾವಿಸಿ, ಅದು ದೇಸಿಯಲ್ಲವೆಂದರಿತಿದ್ದರೂ ಹಳಗನ್ನಡವನ್ನು ಹೊಲಗೆಡಿಸಿ ಬಳಸುತ್ತಾರೆ" ಎಂದಿದ್ದಾನೆ. (೧-೪೮ ಕ.ರಾ.ಮಾ) ಇದು ಭಾಷೆಯ ಬಳಕೆಯ ಬಗ್ಗೆ ಆಧುನಿಕ ಮತ್ತು ಪ್ರಗತಿಶೀಲ ದೃಷ್ಟಿಯನ್ನು ಪ್ರಕಟಪಡಿಸುವುದೆಂದಷ್ಟೆ ಅಲ್ಲ, ಕವಿರಾಜ ಮಾರ್ಗ ಗ್ರಂಥವು ರಚಿತವಾಗಿದ್ದ 9ನೆಯ ಶತಕದಲ್ಲಿ ಹಳಗನ್ನಡವೂ ಬಹುಕಾಲದಿಂದ ಉಳಿದು ಬಂದಿದ್ದರೂ ಪ್ರತಿಯೊಂದು ಅಂಶದಲ್ಲೂ ಅದು ಹೇಗೆ ಮಾದರಿಯಾಗಿದ್ದಿರಲಾರದೆಂಬುದನ್ನು ಸೂಚಿಸುತ್ತದೆ. ಈ ಶತಕದಲ್ಲಿದ್ದ ಗ್ರಂಥಕಾರರಲ್ಲಿ ಅಸಗನ ಉಲ್ಲೇಖವನ್ನು ಮಾಡಲೇಬೇಕು. ಕನ್ನಡ ಮತ್ತು ಸಂಸ್ಕೃತ ಗ್ರಂಥಗಳ ಜತೆಗೆ ಈತನು ಬರೆದಿದ್ದ 'ಕರ್ಣಾಟಕ ಕುಮಾರ ಸಂಭವ'ವು ಬಹುಶಃ ಕಾಳಿದಾಸನ ಸುಪ್ರಸಿದ್ಧ ಕಾವ್ಯವಾದ ಕುಮಾರ ಸಂಭವದ ಕನ್ನಡಾನುವಾದವಿದ್ದಿರಬೇಕು. ಒಂದನೆಯ ಗುಣವರ್ಮನು ಅಸಗನ ಸಮಕಾಲೀನನು. ಹರಿವಂಶ ಮತ್ತು ಶೂದ್ರಕ ಎಂಬೆರಡು ಗ್ರಂಥಗಳು ಈತನವೆಂದೂ ಇವುಗಳಲ್ಲಿ ಒಂದು ಧಾರ್ಮಿಕ ಗ್ರಂಥ, ಇನ್ನೊಂದು ಲೌಕಿಕ ಗ್ರಂಥವೆಂದು ತಿಳಿದು ಬಂದಿದೆ. ಈ ಗ್ರಂಥಗಳಿಂದ ಉದ್ಧರಿಸಲ್ಪಟ್ಟ ಪದ್ಯಗಳು ಅನಂತರದ ಕಾವ್ಯ ಸಂಗ್ರಹಗಳಲ್ಲಿ ಗುರುತಿಸಲ್ಪಟ್ಟಿವೆ. ವಡ್ಡಾರಾಧನೆ ಎಂಬ ಗ್ರಂಥವು 10ನೆಯ ಶತಕದ ಆದಿ ಭಾಗದಲ್ಲಿ ಶಿವಕೋಟ್ಯಾಚಾರ್ಯನೆಂಬವನಿಂದ ರಚಿತವಾಯ್ತೆಂದು ನಂಬಲಾಗಿದೆ. ಆದರೆ ಈ ಗ್ರಂಥದ ಕಾಲ ಮತ್ತು ಕರ್ತೃತ್ವಗಳೆರಡೂ ಖಚಿತಪಟ್ಟಿಲ್ಲ. ವಡ್ಡಾರಾಧನೆಯು ಜೈನ ಪುರಾಣ ಇತಿಹಾಸಗಳಿಂದ ಆಯ್ಕೆಗೊಂಡು ವೈಶಿಷ್ಟ್ಯಪೂರ್ಣ ಗದ್ಯ ಶೈಲಿಯಲ್ಲಿ ರಚಿತವಾದ ಕಥೆಗಳ ಸಂಗ್ರಹ. ಹೀಗೆ ಕವಿರಾಜ ಮಾರ್ಗಕ್ಕಿಂತ ಮೊದಲು ಅನೇಕ ಶತಮಾನಗಳಿಂದ ಹಳಗನ್ನಡ ಸಾಹಿತ್ಯದ ಸುದೀರ್ಘ ಪರಂಪರೆಯೊಂದು ಪ್ರಸ್ಥಾಪಿತವಾಗಿ ಹತ್ತನೆಯ

ಶತಕದಿಂದ ಆರಂಭವಾದ ಹಳಗನ್ನಡ ಚಂಪೂ ಮಹಾ ಕಾವ್ಯಗಳ ಸೃಷ್ಟಿಗೆ ತಕ್ಕ ಮಾರ್ಗವನ್ನು ಸಿದ್ಧಪಡಿಸಿತ್ತೆಂದು ಕಂಡುಬರುತ್ತದೆ. 10ನೆಯ ಶತಕದಲ್ಲಿ ಪಂಪ, ಪೊನ್ನ ಮತ್ತು ರನ್ನ ಎಂಬ ಮೂವರು ಕವಿಗಳು ಹಳಗನ್ನಡದಲ್ಲಿ ಮಾರ್ಗ ಕಾವ್ಯಗಳ ಮಹೋಜ್ವಲ ಸರಣಿಗೆ ಕಾರಣಕರ್ತರಾದರು. ಮನೋಧರ್ಮ ಹಾಗೂ ಪ್ರತಿಭಾ ಶಕ್ತಿಗಳು ಬೇರೆ ಬೇರೆಯಾಗಿದ್ದರೂ ಈ ಮೂವರಲ್ಲೂ ಒಂದು ಸಮಾನಾಂಶವಿತ್ತು. ಜೈನ ಧರ್ಮದಲ್ಲಿ ಅಪಾರ ಶ್ರದ್ಧಾವಂತರಾಗಿದ್ದರೂ ಅವರದು ವಿಶಾಲ ದೃಷ್ಟಿ. ಆದ್ದರಿಂದಲೇ ಬಹುಶಃ ಮೊದಲನೆಯ ಗುಣವರ್ಮನು ಹಾಕಿಕೊಟ್ಟ ಸಂಪ್ರದಾಯವನ್ನು ಅನುಸರಿಸಿ ಒಂದು ಲೌಕಿಕ, ಇನ್ನೊಂದು ಆಗಮಿಕ ಗ್ರಂಥಗಳನ್ನು ಇವರು ರಚಿಸಿದರು. ಕನ್ನಡ ಕಾವ್ಯಕ್ಕೆ ವಿಶಿಷ್ಟವೆನಿಸಿದ ಚಂಪೂ ರೂಪದಲ್ಲಿ ಸೃಜನಾತ್ಮಕ ಬರೆವಣಿಗೆಯ ಕಲೆ ಈ ಕಾಲದಲ್ಲಿ ಉನ್ನತ ಶ್ರೇಣಿಯನ್ನು ಮುಟ್ಟಿತ್ತು. ಈ ಶ್ರೇಣಿಯ ಶ್ರೇಷ್ಠ ಕವಿಗಳಲ್ಲಿ ಪಂಪನು ಎದ್ದು ಕಾಣುವಂಥವನು. ಈತನದು ವರ್ಣರಂಜಿತ ವ್ಯಕ್ತಿತ್ವ. ಕವಿಯೂ ಕಲಿಯೂ ಎಂದು ಹೆಸರಾಂತ ಈತನು ಆ ಕಾಲದ ರಾಜಕೀಯದಲ್ಲಿ ಅತ್ಯಂತ ಪ್ರಭಾವ ಶಾಲಿಯಾಗಿದ್ದ ಚಾಲುಕ್ಯ ಸಾಮಂತ ರಾಜ 2ನೆಯ ಅರಿಕೇಸರಿಯ ಆಸ್ಥಾನದಲ್ಲಿ ಆಶ್ರಯ ಪಡೆದಿದ್ದನು. ಇವನು ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯ ಎಂಬೆರಡು ಕಾವ್ಯಗಳನ್ನು ಚಂಪೂ ರೂಪದಲ್ಲಿ ರಚಿಸಿದನು. ಆದಿ ಪುರಾಣವು ಜೈನ ಪುರಾಣಗಳಲ್ಲಿ ಬರುವ ಪ್ರಥಮ ತೀರ್ಥಂಕರನಾದ ಪುರುದೇವನ ಜೀವನ ಹಾಗೂ ಆಧ್ಯಾತ್ಮಿಕ ಪ್ರಗತಿಯನ್ನು ಕುರಿತದ್ದು. ಈ ಕಾವ್ಯದ ವಸ್ತು ನಿರೂಪಣೆ ಬಹು ವಿಸ್ತಾರವಾದುದು. ಮಾರ್ಗ ಪದ್ಧತಿಯ ಮಹಾಕಾವ್ಯದ ತಂತ್ರವನ್ನು ಜಿನಸೇನನ ಸಂಸ್ಕೃತ ಮಹಾ ಪುರಾಣದಲ್ಲಿ ಬಂದ ಕಥಾನಕದೊಂದಿಗೆ ಹಾಳತವಾಗಿ ಜತೆಗೂಡಿಸಲಾಗಿದೆ. ಪುರಾಣದ ವಿವರಗಳಿಂದಲೂ ಜೈನ ತಾತ್ವಿಕ ಚರ್ಚೆಗಳಿಂದಲೂ ಕೆಲವೆಡೆಗಳಲ್ಲಿ ಭಾರವತ್ತಾಗಿದ್ದರೂ ಮಹತ್ವಪೂರ್ಣ ಸನ್ನಿವೇಶಗಳಲ್ಲಿ ಆದಿ ಪುರಾಣವು ಕವಿತ್ವದ ಅತ್ಯುನ್ನತ ಹಂತಗಳಿಗೇರಿದೆ. ಇಂಥಲ್ಲಿ ಪಾತ್ರ ಹಾಗೂ ಕ್ರಿಯೆಗಳೆರಡೂ ಬೆರೆತು, ಕವಿಯ ಹೇಳಿಕೆಯಂತೆ ಧರ್ಮ ಹಾಗೂ ಕಾವ್ಯ ಧರ್ಮಗಳೆರಡರ ಸಾಮರಸ್ಯವು ಸಿದ್ಧಿಗೊಂಡಿದೆ. ಪಂಪನ 2ನೆಯ ಕಾವ್ಯವಾದ ವಿಕ್ರಮಾರ್ಜುನ ವಿಜಯ ಅಥವಾ ಪಂಪ ಭಾರತವು ನಿಸ್ಸಂಶಯವಾಗಿ ಕನ್ನಡದಲ್ಲಿಯ ಅತ್ಯಂತ ಶ್ರೇಷ್ಠ ಕಾವ್ಯಗಳಲ್ಲಿ ಒಂದಾಗಿದೆ. ವ್ಯಾಸ ರಚಿತ ಮಹಾಭಾರತದ ಸಂಗ್ರಹ ರೂಪದ ಕಾವ್ಯಾನುವಾದವಿದು. ಈ ದೃಷ್ಟಿಯಿಂದ ಕವಿ ಇದನ್ನು 'ಸಮಸ್ತ ಭಾರತ' ಎಂದು ಹೆಸರಿಸಿದ್ದಾನೆ. ಈ ಸಂಗ್ರಹ ಕಾರ್ಯದಲ್ಲಿ ಮಹಾ ಭಾರತದ ಸಮಗ್ರ ಕಥಾವಸ್ತುವನ್ನೂ, ಪಾತ್ರಗಳ ವೈಶಿಷ್ಟ್ಯವನ್ನೂ ಗುರಿ ತಪ್ಪದಂತೆ ಗ್ರಹಿಸಿದುದು ; ಈ ಮಾನವೀಯ ಚರಿತ್ರೆಯ ಬಹು ಮುಖ್ಯ ಭಾಗವಾದ ಭ್ರಾತೃ ಸಂಘರ್ಷದ ಕಥೆ ನಾನಾ ವಿಧವಾದ ಪಾತ್ರ ವರ್ಗಗಳನ್ನೊಳಗೊಂಡು, ಕೊನೆಯಲ್ಲಿ ಕುರುಕ್ಷೇತ್ರ ಮಹಾಯುದ್ಧದಲ್ಲಿ ಪರ್ಯಾವಸಾನಗೊಂಡದ್ದು,- ಇದೆಲ್ಲವೂ ಉನ್ನತ ಔಚಿತ್ಯ ಪ್ರಜ್ಞೆಯಿಂದ ಮಹೋಜ್ವಲವಾಗಿ ಚಿತ್ರಿತವಾಗಿದೆ. ಅಲ್ಲದೆ, ಅರ್ಜುನನನ್ನು ಆಶ್ರಯವಿತ್ತ ರಾಜ ಅರಿಕೇಸರಿಯೊಂದಿಗೆ ಸಮೀಕರಿಸಿ ಸಮಕಾಲೀನ ಚರಿತ್ರೆಯನ್ನು ಈ ಮಹಾಕಾವ್ಯದ ಕಥೆಯೊಡನೆ ಬೆರೆಸಲು ಕವಿ ಯತ್ನಿಸಿದ್ದಾನೆ. ಕವಿಯ ಕಲ್ಪನಾ ಶಕ್ತಿ ಮತ್ತು ಅಭಿವ್ಯಕ್ತಿ ಸಾಮರ್ಥ್ಯಗಳು ಅತ್ಯುತ್ತಮವಾಗಿ ಪ್ರಕಟವಾಗಿವೆ. ಮತ್ತು ಕವಿಯೆ ತನ್ನ ಮೊದಲ ಕಾವ್ಯದಲ್ಲಿ ಹೇಳಿರುವ 'ಸಂಸಾರ ಸಾರೋದಯ' ಅಥವಾ ಸಾಧ್ಯವಿರುವ ಸಕಲ ವಿಧದ ಅನುಭವ ಸರ್ವಸ್ವವು ಇಲ್ಲಿ

ಮಾರ್ಗ ಕಾವ್ಯದ ಮಹೋನ್ನತಿಯ ಚೊಕ್ಕತನದಿಂದ ಸ್ಫುಟವಾಗಿ ತಳತಳಿಸುತ್ತದೆ. ಎರಡೂ ಕಾವ್ಯಗಳಲ್ಲಿ ಪಂಪನ ಶೈಲಿ ಕೆಲವೆಡೆಗಳಲ್ಲಿ ಕ್ಲಿಷ್ಟ ಹಾಗೂ ಆಡಂಬರದ್ದಾಗಿದ್ದರೂ 'ಮಾರ್ಗ' ಮತ್ತು 'ದೇಸಿ'ಯ ಎಂದರೆ ಮಹೋನ್ನತ ಹಾಗೂ ಜನಪ್ರಿಯ ಭಾಷಾ ಸರಣಿಗಳ ಅಸಾಧಾರಣ ಸಾಮರಸ್ಯದಿಂದ ಕೂಡಿದೆ. ಪಂಪನ ಸಮಕಾಲೀನನೂ ಉದ್ದಾಮ ಕವಿಯೂ ಆಗಿದ್ದ ಪೊನ್ನನು ಭುವನೈಕರಾಮಾಭ್ಯುದಯ ಮತ್ತು ಶಾಂತಿ ಪುರಾಣಗಳನ್ನು ರಚಿಸಿದನು. ಇವುಗಳಲ್ಲಿ ಮೊದಲನೆಯ ಕೃತಿ ಉಪಲಬ್ಧವಿಲ್ಲ. ಆದರೆ ಅದರ ಕೆಲವು ಉದ್ಧೃತ ಪದ್ಯಗಳಿಂದ ಅದೊಂದು ರಾಮಾಯಣ ಕಾವ್ಯವಿದ್ದಿರಬಹುದು. ಬಹುಶಃ ಪಂಪ ಭಾರತದ ಹಾಗೆಯೇ ಐತಿಹಾಸಿಕ ಧ್ವನಿಯುಳ್ಳುದ್ದೂ ಆಗಿರಬೇಕು. ಉಪಲಬ್ಧವಿರುವ ಆತನ ಶಾಂತಿ ಪುರಾಣವೂ ಆದಿಪುರಾಣದಂತೆ ಆಗಮಿಕ ಕಾವ್ಯ. 16ನೆಯ ತೀರ್ಥಂಕರನಾದ ಶಾಂತಿನಾಥನ ಜೀವನ ಹಾಗೂ ಮಹಿಮಾತಿಶಯಗಳನ್ನು ಕುರಿತುದು. ಈ ಕಾವ್ಯದ 9 ಆಶ್ವಾಸಗಳು ಇಲ್ಲಿಯ ಕೇಂದ್ರ ಪಾತ್ರವಾದ ಶಾಂತಿನಾಥನ 11 ಪೂರ್ವ ಜನ್ಮಗಳಿಗೆ ಮೀಸಲಾಗಿದ್ದು, 3 ಆಶ್ವಾಸಗಳು ಮಾತ್ರ ಆತನ ಕೊನೆಯ ಜನ್ಮದ ತಪಸ್ಸಾಧನೆ ಮತ್ತು ಕೈವಲ್ಯ ಸಿದ್ಧಿಗಳಿಗೆ ಸಂಬಂಧಪಟ್ಟುವಾಗಿವೆ. ಜೈನ ಪುರಾಣ ಕಥನ ಮತ್ತು ಜೈನ ತತ್ವಗಳಿಂದ ಈ ಕೃತಿ ಭಾರವತ್ತಾಗಿದ್ದರೂ ವಿಪುಲ ವಿದ್ವತ್ತಿನ ಜತೆಗೆ ಕಲ್ಪನಾಶಕ್ತಿ ಮತ್ತು ಅಭಿವ್ಯಕ್ತಿ ಸಾಮರ್ಥ್ಯಗಳಿಂದ ಇದು ಗಮನಾರ್ಹವೆನಿಸಿದೆ.

ಈ ರತ್ನತ್ರಯರಲ್ಲಿ ರನ್ನನು ಇನ್ನೊಬ್ಬ ವಿಶಿಷ್ಟ ಕವಿ. ಈತನು 10ನೆಯ ಶತಕದ ಕೊನೆಯಲ್ಲಿದ್ದನು. ತನ್ನ ಹಿರಿಯ ಸಮಕಾಲೀನರಾದ ಪಂಪ - ಪೊನ್ನರ ದಾರಿಯನ್ನೆ ತುಳಿಯುತ್ತ ಗದಾಯುದ್ಧ ಮತ್ತು ಅಜಿತ ಪುರಾಣ ಎಂಬೆರಡು ಉದ್ಗ್ರಂಥಗಳನ್ನು ರಚಿಸಿದನು. ಈತನು ತನ್ನ ಗದಾಯುದ್ಧದಲ್ಲಿ ಮಹಾಭಾರತ ಯುದ್ಧದ ಕೊನೆಯ ದಿನದ ಮೇಲೆ ತನ್ನ ಲಕ್ಷ್ಯವನ್ನು ಕೇಂದ್ರೀಕರಿಸಿದ್ದಾನೆ. ಭೀಮನು ಅಡಗಿ ಕುಳಿತಿದ್ದ ದುರ್ಯೋಧನನನ್ನು ಹುಡುಕಿ, ಆತನನ್ನು ಗದಾಯುದ್ಧದಲ್ಲಿ ಪರಾಭವಗೊಳಿಸಿ ದ್ರೌಪದಿಗಿತ್ತಿದ್ದ ವಚನವನ್ನು ಪೂರೈಸುತ್ತಾನೆ. ಮಹಾಭಾರತದ ಪ್ರಮುಖ ಕಥಾ ವಸ್ತುವಿನ ಅಂಶಗಳನ್ನು 'ಸಿಂಹಾವಲೋಕನ ಕ್ರಮ'ದಿಂದ ಈ ಕಾವ್ಯದಲ್ಲಿ ತಂದುದು ಕವಿಯ ಜಾಣ್ಮೆಯ ಕುರುಹು. ರನ್ನನು ಸಂಸ್ಕೃತ ಆಕರಗಳಿಂದ ಅನೇಕ ಅಂಶಗಳನ್ನು ವಿಪುಲವಾಗಿ ಸ್ವೀಕರಿಸಿದ್ದಾನಲ್ಲದೆ ಪಂಪ ಭಾರತಕ್ಕೆ ವಿಶೇಷವಾಗಿ ಋಣಿಯಾಗಿದ್ದಾನೆ. ಆದರೂ ಈ ಕಥಾನಕವನ್ನು ತನ್ನದೇ ಆದ ನಾಟಕೀಯ ಹಾಗೂ ಶಕ್ತಿಯುತ ರೀತಿಯಲ್ಲಿ ಬೆಳೆಸಿಕೊಂಡು ಹೋಗಿದ್ದಾನೆ. ಚಂಪೂ ರೂಪದಲ್ಲಿದ್ದರೂ ಈ ಕಾವ್ಯವು ಒಂದು ಪ್ರಭಾವಶಾಲಿ ನಾಟಕದಂತೆ ಭಾಸವಾಗುತ್ತದೆ. ತನ್ನ ಕಾವ್ಯ ನಾಯಕ ಭೀಮನನ್ನು ತನ್ನ ಆಶ್ರಯದಾತನಾಗಿದ್ದ ಚಾಲುಕ್ಯ ವಂಶದ ಸತ್ಯಾಶ್ರಯನೊಂದಿಗೆ ಸಮೀಕರಿಸಿದ್ದರಿಂದ ಪಂಪ ಭಾರತದಂತೆ ಗಧಾ ಯುದ್ಧವೂ ತತ್ಕಾಲೀನ ಮಹತ್ವವನ್ನು ಹೊಂದಿತ್ತು. ರನ್ನನ ಇನ್ನೊಂದು ಕಾವ್ಯವಾದ ಅಜಿತ ಪುರಾಣವು ಎರಡನೆಯ ತೀರ್ಥಂಕರನಾದ ಅಜಿತನಾಥನ ಜೀವನ ಕಥೆ. ಈ ತೀರ್ಥಂಕರನ ಜೀವನದಲ್ಲಿಯ ಮಹತ್ವಪೂರ್ಣ ಘಟನೆಗಳಾದ ಪಂಚ ಕಲ್ಯಾಣಗಳಿಗೆ ಇಲ್ಲಿ ವಿಶೇಷ ಗಮನಕೊಡಲಾಗಿದೆ - ಆತನ ಭವಾವಳಿಗಲ್ಲ.

11ನೆಯ ಮತ್ತು 12ಶತಕಗಳಲ್ಲಿ ಹಳಗನ್ನಡದ ಮಾರ್ಗ ಕಾವ್ಯ ಪದ್ಧತಿಯನ್ನು

ಮುಂದುವರಿಸಿಕೊಂಡು ಹೋದ ಕವಿಗಳಲ್ಲಿ ಮೊದಲನೆಯ ಹಾಗೂ ಎರಡನೆಯ ನಾಗವರ್ಮರು, ದುರ್ಗಸಿಂಹ, ನಾಗಚಂದ್ರ, ನಯಸೇನ ಹಾಗೂ ಬ್ರಹ್ಮಶಿವ ಇವರು ಉಲ್ಲೇಖನಾರ್ಹರು. ಮೊದಲನೆಯ ನಾಗವರ್ಮನು ಬಾಣನ ಕಾದಂಬರಿಯ ಕನ್ನಡ ಅನುವಾದ ಮಾಡಿದನು. ಉದ್ದುದ್ದ ಸಮಾಸಗಳಿಂದ ಕೂಡಿದ್ದಾಗಿ ಕ್ಲಿಷ್ಟವೂ ಮಹದಾಡಂಬರದ್ದೂ ಆಗಿದ್ದ ಸಂಸ್ಕೃತ ಗದ್ಯ ಮಾದರಿಯ ಕಾವ್ಯವನ್ನು ಸುಭಗವೂ, ಸುಲಲಿತವೂ ಆದ ಚಂಪೂ ರೂಪದ ರಚನೆಗೆ ಪರಿವರ್ತಿಸಿದನು. ಹೀಗೆ ಈತನ ಕರ್ಣಾಟಕ ಕಾದಂಬರಿಯು ಭಾಷಾಂತರವಾಗದೆ ಪ್ರತಿ ಸೃಷ್ಟಿಯೆ ಆಯಿತು. 2ನೆಯ ನಾಗವರ್ಮನು ವ್ಯಾಕರಣ, ಅಲಂಕಾರ, ನಿಘಂಟು ಮೊದಲಾದ ಶಾಸ್ತ್ರ ಗ್ರಂಥಗಳ ರೂಪದಲ್ಲಿ ಕನ್ನಡಕ್ಕೆ ಬಹು ಬೆಲೆಯುಳ್ಳ ಕೊಡುಗೆಯನ್ನಿತ್ತಿರುವನಲ್ಲದೆ ಕೊನೆಯ ತೀರ್ಥಂಕರನಾದ ಮಹಾವೀರನನ್ನು ಕುರಿತು ವರ್ಧಮಾನ ಪುರಾಣವನ್ನು ರಚಿಸಿದ್ದಾನೆ. ಈ ಮೊದಲ ಕಾಲಾವಧಿಯಲ್ಲಿ ಕೆಲ ಸಲ ಅತಿ ಕಠಿಣವೂ, ಜಟಿಲವೂ ಆಗಿದ್ದ ಚಂಪೂ ಶೈಲಿ ನಾಗಚಂದ್ರ ಹಾಗೂ ಆತನ ತರುವಾಯದ ಇತರ ಕವಿಗಳ ಕೈಯಲ್ಲಿ ಸರಳವೂ ಸುಗಮವೂ ಆಯ್ತು. ಇದಕ್ಕೆ ಬಹುಶಃ ಮೊದಲನೆಯ ನಾಗವರ್ಮನ ಪ್ರಭಾವವೂ ಕಾರಣವಾಗಿರಬೇಕು. ನಾಗಚಂದ್ರನು ವಿಮಲಸೂರಿಯ ಪ್ರಾಕೃತ ಮೂಲದಿಂದ ಪ್ರಭಾವಿತನಾಗಿ ಜೈನ ಪದ್ಧತಿಯ ರಾಮಾಯಣ ರಚನೆ ಮಾಡಿದನು. ಈತನ ರಾಮಾಯಣದಲ್ಲಿ ರಾವಣ ಪಾತ್ರವು ಉದಾತ್ತ ಪ್ರಕೃತಿಯದಾಗಿ ನಿರೂಪಿತವಾಗಿದ್ದು, ಆತನು ಒಂದು ದುರ್ಬಲ ಸಮಯದಲ್ಲಿ ಆಶೆಗೆ ಸಿಕ್ಕು ಬಿದ್ದು ಸೀತೆಯನ್ನು ಕದ್ದೊಯ್ದನು, ಆದರೆ ಅನಂತರದಲ್ಲಿ ಸೀತೆಯ ದೃಢವಾದ ಪತಿ ಭಕ್ತಿಯನ್ನು ಕಂಡು ಪಶ್ಚಾತ್ತಾಪಗೊಂಡನು. ಈ ಕಲ್ಪನೆ ವಿಮಲಸೂರಿಯಿಂದಲೇ ಪ್ರೇರಿತವಾಗಿದ್ದು ಹೊಸತಲ್ಲವಾದರೂ ದುರಂತ ಸನ್ನಿವೇಶದ ವಿಲಕ್ಷಣ ಉತ್ಕಟತೆಯಿಂದಾಗಿ ನಿರೂಪಣೆಯಲ್ಲಿ ನಿಜವಾಗಿಯೂ ಮೂಲಕ್ಕಿಂತ ಹೆಚ್ಚು ಪರಿಷ್ಕೃತಗೊಂಡದ್ದಾಗಿದೆ. ನಾಗಚಂದ್ರನು ತನ್ನ ಇನ್ನೊಂದು ಕೃತಿಯಾದ ಮಲ್ಲಿನಾಥ ಪುರಾಣದಲ್ಲಿ ಉಜ್ವಲ ಧರ್ಮ ಶ್ರದ್ಧೆ ಹಾಗೂ ತೀವ್ರ ಕಾಮೋತ್ಸಾಹ ಇವೆರಡರ ಸಮನ್ವಯ ಸಾಧನೆಯಲ್ಲಿ ಕನ್ನಡ ಜೈನ ಪುರಾಣಗಳ ಸಂಪ್ರದಾಯವನ್ನು ಮುಂದುವರಿಸಿದ್ದಾನೆ. ದುರ್ಗಸಿಂಹನು ವಸುಭಾಗಭಟ್ಟನ ಪಂಚತಂತ್ರವನ್ನು ಕನ್ನಡಿಸಿ ಪಂಚತಂತ್ರದ ಇನ್ನೊಂದು ಅಪರೂಪ ಸಂಪ್ರದಾಯವನ್ನು ಬಹಿರಂಗಗೊಳಿಸಿದ್ದಾನೆ. ಈ ಸಂಪ್ರದಾಯದ ಕೆಲವೇ ಆಕರಗಳು ಮುಖ್ಯವಾಗಿ ಬೃಹದ್ಭಾರತದಲ್ಲಿ ದೊರೆತಿವೆ. ದುರ್ಗಸಿಂಹನ ಈ ಕೃತಿ ಚಂಪೂ ರೂಪದಲ್ಲಿದ್ದು ಕಥಾ ಪ್ರಸಂಗಗಳಲ್ಲೆಲ್ಲಾ ಈತನು ವಿಪುಲವಾಗಿ ಗದ್ಯವನ್ನೇ ಬಳಸಿದ್ದಾನೆ. ನಯಸೇನನ ಧರ್ಮಾಮೃತವು ಒಂದು ಕಥಾಗುಚ್ಛ. ಇಲ್ಲಿಯ ಕಥೆಗಳು ಜೈನತತ್ವ ಹಾಗೂ ಆಚಾರಗಳಿಗೆ ಕನ್ನಡಿ ಹಿಡಿದಂತಿವೆ. ಈ ಕಥೆಗಳ ಉದ್ದೇಶವು ಪ್ರಸ್ಫುಟವಾಗಿ ಮತೀಯವಾಗಿದ್ದರೂ ಇಲ್ಲಿಯ ಕಥನ ಕಲೆ ಸಂಪದ್ಭರಿತ ಕಲ್ಪನಾಲಹರಿಗಳಿಂದಲೂ, ದೇಸಿಯ ನುಡಿಗಟ್ಟುಗಳಿಂದಲೂ ಜೀವ ಕಳೆ ತುಂಬಿ ತುಳುಕುತ್ತ ಗೆಲುವುಳ್ಳದ್ದಾಗಿದೆ. ಅನಂತರ ಬಂದ ಬ್ರಹ್ಮಶಿವನು ತನ್ನ ಸಮಯ ಪರೀಕ್ಷೆ ಎಂಬ ಗ್ರಂಥದಲ್ಲಿ ಮುಚ್ಚುಮರೆಯಿಲ್ಲದೆ ಕಟುವಿಡಂಬನಕಾರನಾಗಿ ಮೆರೆದಿದ್ದಾನೆ. ಈ ಗ್ರಂಥವು ಆತನ ಕಾಲದ ಧಾರ್ಮಿಕ ತತ್ವ ಹಾಗೂ ಆಚರಣೆಗಳನ್ನು ನೇರವಾದ ಟೀಕೆಗೆ ಗುರಿಪಡಿಸಿದೆ. ಈ ಕೃತಿಯಲ್ಲಿ ಆ ಕಾಲದ ಬಾಹ್ಯಾಡಂಬರವನ್ನೂ, ಭಾವಿಕತನವನ್ನೂ ಗೇಲಿ ಮಾಡುತ್ತಾ ಕನ್ನಡ ಸಾಹಿತ್ಯ ಚರಿತ್ರೆಯಲ್ಲೆ ಮೊಟ್ಟ ಮೊದಲಬಾರಿ ಜನತೆಯ

ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿ ಗತಿಗಳ ಮೇಲೆ ಅವನು ಬೆಳಕು ಚೆಲ್ಲಿದ್ದಾನೆ. ಇವನ ಈ ವಿಡಂಬನೆಯಲ್ಲಿ ಸಾಮಾನ್ಯವಾಗಿ ಜೈನ ಮತದ ಬಗ್ಗೆ ಪಕ್ಷಪಾತ, ಇತರ ಮತ ಪಂಥಗಳ ಬಗ್ಗೆ ಪ್ರತಿಕೂಲ ಧೋರಣೆ ಎದ್ದು ಕಾಣುತ್ತವೆ. ಈ ಕಾಲದ ಗ್ರಂಥಗಳು ಪ್ರತಿಪಾದಿತ ವಿಷಯವೇನಿದ್ದರೂ ಹೆಚ್ಚಾಗಿ ಚಂಪೂ ರೂಪದಲ್ಲಿವೆ. ಶಾಸ್ತ್ರ ಗ್ರಂಥಗಳೂ ಈ ರೂಪದಲ್ಲಿವೆ. ಕೆಲ ಸಲ ವಚನ ಭಾಗಗಳಿಲ್ಲದೆ ಕಂದ-ವೃತ್ತಗಳಲ್ಲಿ ಮಾತ್ರ ರಚಿತವಾಗಿವೆ. ಈ ಮೊದಲೇ ಉಲ್ಲೇಖಿಸಿದಂತೆ ಗದ್ಯ ಸರಣಿಯಲ್ಲೆ ಇಡಿಯಾಗಿ ರಚಿತವಾಗಿದ್ದ ವಡ್ಡಾರಾಧನೆ ಮತ್ತು ಚಾವುಂಡರಾಯನ ಚಾವುಂಡರಾಯ ಪುರಾಣದಂಥ ಕೃತಿಗಳು ವಿರಳವಾಗಿ ಮಾತ್ರ ಕಂಡು ಬರುತ್ತವೆ. ಇವು ಜೈನ ಪುರಾಣ ಕಥಾನಕಗಳನ್ನು ಗುರಿ ತಪ್ಪದ ಪ್ರೌಢ ಶೈಲಿಯಲ್ಲಿ ನಿರೂಪಿಸುತ್ತವೆ. ಕನ್ನಡದಲ್ಲಿ ಸೃಜನಾತ್ಮಕ ಮತ್ತು ವಿಮರ್ಶನಾತ್ಮಕ ಇವೆರಡರಲ್ಲೂ ಕೃತಿ ರಚನೆ ಮಾಡಿದವರಲ್ಲಿ ಜೈನರೇ ಮೊದಲಿಗರು. ಆದ್ದರಿಂದ ಈ ಕಾಲದ ಸಾಹಿತ್ಯ ಪ್ರಪಂಚದಲ್ಲಿ ಅವರದೇ ಪ್ರಾಬಲ್ಯವಿತ್ತು. ಕನ್ನಡ ಭಾಷಾ-ಸಾಹಿತ್ಯಗಳ ಸ್ಥಾನಮಾನಗಳನ್ನು ಅವರೇ ಉನ್ನತಗೊಳಿಸಿದುದು ಸ್ವಾಭಾವಿಕವಾಗಿದೆ.

12ನೆಯ ಶತಕದ ಮಧ್ಯದಲ್ಲಿ ವಚನ ಎಂಬ ಅನುಭಾವಿಕ ಗದ್ಯ ಕಾವ್ಯರೂಪವು ಹೊಸತಾಗಿ ತಲೆಯೆತ್ತಿತು. ಇದೊಂದು ಪ್ರಭಾವಶಾಲೀ ಆತ್ಮಾಭಿವ್ಯಕ್ತಿಯ ಮಾಧ್ಯಮವಾಗಿ ಬಸವೇಶ್ವರರಿಂದ ಬಳಕೆಯಲ್ಲಿ ಬಂದಿತು. ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿಯ ಆಂದೋಲನದ ಮುಂದಾಳುಗಳಾಗಿದ್ದ ಬಸವೇಶ್ವರರ ಪ್ರೇರಣೆಯಿಂದ ಸಾವಿರಾರು ಶರಣರು ತಂಡತಂಡವಾಗಿ ಈ ಪ್ರತಿಭಟನೆಯಲ್ಲಿ ಪಾಲ್ಗೊಂಡು ಅವರ ಅನುಯಾಯಿಗಳಾದರು. ಇದರ ಪರಿಣಾಮವಾಗಿ ಸಾಹಿತ್ಯ ಕ್ರಾಂತಿಯ ಹೊಸ ಗಾಳಿ ಬೀಸತೊಡಗಿತು. ಹಳಗನ್ನಡ ಸಾಹಿತ್ಯದ ನಡೆಗೆ ಒಂದು ಬಗೆಯ ಕುಲುಕಾಟವುಂಟಾಯ್ತು. ಕ್ರಮೇಣ ನಡುಗನ್ನಡ ಅಥವಾ ಹೊಸಗನ್ನಡವು ಹಳಗನ್ನಡದ ಸ್ಥಾನವನ್ನಾಕ್ರಮಿಸತೊಡಗಿತು. ಜನಪ್ರಿಯ ಛಂದಸ್ಸುಗಳಾದ ರಗಳೆ-ಷಟ್ಪದಿಗಳಲ್ಲಿ ಕಾವ್ಯ ರಚನೆ ಮಾಡಲು ಬಹು ಜನ ಕವಿಗಳು ಮುಂದಾದರು. ಹೀಗಿದ್ದರೂ ಈ ಹೊಸ ಆಂದೋಲನದ ಪ್ರಭಾವವೆಷ್ಟೋ ಚಂಪೂ ರೂಪದ ಮೇಲಾಗಲಿಲ್ಲ. ಇತರ ಕಾವ್ಯ ಪ್ರಕಾರಗಳೊಂದಿಗೆ ಚಂಪೂ ಮುಂದುವರಿಯಿತು. ಹರಿಹರನು ಕೂಡ ತನ್ನ ಎಲ್ಲ ಶರಣರ ಚರಿತ್ರೆಗಳನ್ನು ಒಂದು ಆಶ್ವಾಸದಲ್ಲಿ ಗದ್ಯ ಇನ್ನೊಂದರಲ್ಲಿ ರಗಳೆಯ ಛಂದಸ್ಸು ಹೀಗೆ ಒಂದಾದ ಮೇಲೊಂದು ವರಸೆ ವರಸೆಯಾಗಿ ಬರುವಂತೆ ಮಿಶ್ರಣಗೊಳಿಸಿ ಬರೆದಿದ್ದರೂ ಗಿರಿಜಾ ಕಲ್ಯಾಣವೆಂಬ ಪೌರಾಣಿಕ ವಸ್ತುವನ್ನು ಉತ್ತಮ ಹಳಗನ್ನಡದ ಚಂಪೂವಿನಲ್ಲೆ ರಚಿಸಿದನು. ನೇಮಿಚಂದ್ರನು ಲೀಲಾವತಿ ಮತ್ತು ನೇಮಿನಾಥ ಪುರಾಣಗಳೆರಡನ್ನೂ - ಒಂದು ಲೌಕಿಕ ಇನ್ನೊಂದು ಆಗಮಿಕ ಕಾವ್ಯವಾಗಿ ಉನ್ನತ ಕಾವ್ಯಗುಣದಿಂದ ಕೂಡಿದ ಚಂಪೂ ರೂಪಗಳಲ್ಲೆ ರಚಿಸಿದನು. ಅವನ ತರುವಾಯ ವಿವಿಧ ಕಾವ್ಯಗುಣವುಳ್ಳ ಅನೇಕ ಕವಿಗಳು ಬಂದಿದ್ದಾರೆ. ಇವರಲ್ಲಿ ಜನ್ನನು ಅತ್ಯಂತ ಪ್ರಮುಖ ಕವಿ. ಈತನ ಯಶೋಧರ ಚರಿತೆ ಮತ್ತು ಅನಂತನಾಥ ಪುರಾಣಗಳು ಜೈನ ಧರ್ಮ ಮತ್ತು ನೀತಿಗಳನ್ನು ಪ್ರತಿಪಾದಿಸಲೆಂದೇ ರಚಿತವಾಗಿದ್ದರೂ, ಸ್ತ್ರೀ-ಪುರುಷರ ನಡುವಿನ ಪ್ರಣಯದ ರಹಸ್ಯವನ್ನೂ ಅದರ ಹಿನ್ನೆಲೆಯ ಮನೋ ವಿಶ್ಲೇಷಣೆಯನ್ನೂ ಚಿತ್ರಿಸುವಲ್ಲಿ ಇಲ್ಲಿಯ ಕಥಾನಕವನ್ನು ಜನ್ನನು ಬಹು ಜಾಣ್ಮೆಯಿಂದ ಬಳಸಿಕೊಂಡಿದ್ದಾನೆ. ಆಂಡಯ್ಯನು ಕಬ್ಬಿಗರ ಕಾವ ಎಂಬ

ಚಮತ್ಕೃತಿಯುಕ್ತ ಕಾಲ್ಪನಿಕ ಕಾವ್ಯವನ್ನು ರಚಿಸುವಲ್ಲಿ ಕಲ್ಪಕತೆ ಮತ್ತು ನಿರೂಪಣಾ ವಿಧಾನಗಳೆರಡರಲ್ಲೂ ಬಹು ಮಟ್ಟಿಗೆ ಮೌಲಿಕತೆಯನ್ನು ಪ್ರದರ್ಶಿಸಿದ್ದಾನೆ. ಮೊಟ್ಟ ಮೊದಲ ಬಾರಿ ಈತನು ಚಂಪೂ ರೂಪದಲ್ಲಿ ಸಂಸ್ಕೃತವನ್ನು ನೇರವಾಗಿ ಬಳಸದೆ ಕಾವ್ಯ ರಚನೆ ಮಾಡಿದ್ದಾನೆ.

ಇದೇ ಕಾಲದಲ್ಲಿ ನೇಮಿಚಂದ್ರನ ಸಮಕಾಲೀನನಾಗಿದ್ದ ರುದ್ರ ಭಟ್ಟನು ಬ್ರಾಹ್ಮಣ ಶಿಷ್ಟ ಸಂಪ್ರದಾಯದ ಸಂಕೋಲೆಗಳನ್ನು ಕಳಚಿ ಹಾಕಿ ಶ್ರೀ ಕೃಷ್ಣ ಚರಿತ್ರೆಯನ್ನು ಜಗನ್ನಾಥ ವಿಜಯವೆಂಬ ಹಳಗನ್ನಡ ಚಂಪೂ ಕಾವ್ಯ ರೂಪದಲ್ಲಿ ಬರೆದನು. ಅವನ ತರುವಾಯ ಬಂದ ಚೌಂಡರಸನು ತನ್ನ ಅಭಿನವ ದಶಕುಮಾರ ಚರಿತೆಯಲ್ಲಿ ವಿಠ್ಠಲ ಭಕ್ತಿಯ ಅಂಶವನ್ನು ಹೊಸದಾಗಿ ಸೇರಿಸಲು ಯತ್ನಿಸಿದ್ದಾನೆ.

ಈ ಸಾಹಿತ್ಯ ಚರಿತ್ರೆಯ ಮೂರನೆಯ ಕಾಲಾವಧಿಯಲ್ಲಿ ಎಂದರೆ 14 ರಿಂದ 16ನೆಯ ಶತಕದವರೆಗೆ ಷಟ್ಪದಿ ಮತ್ತು ಸಾಂಗತ್ಯ ಛಂದೋರೂಪಗಳು ಕುಮಾರವ್ಯಾಸ, ಚಾಮರಸ ಮತ್ತು ರತ್ನಾಕರ ವರ್ಣಿ ಮುಂತಾದ ಶ್ರೇಷ್ಠ ಕವಿಗಳಿಂದ ಉನ್ನತ ರೀತಿಯಲ್ಲಿ ರೂಢಿಗೆ ಬಂದು ಪ್ರಭುತ್ವ ಪಡೆದವು. ಈ ಕಾಲದಲ್ಲಿ ಹಳಗನ್ನಡ ಚಂಪೂ ಕಾವ್ಯ ರಚನೆ ತೀರ ಕುಗ್ಗಿ ಹೋಯ್ತು. ಪುರಂದರದಾಸ-ಕನಕದಾಸರಂಥ ಹರಿದಾಸರ ಭಕ್ತಿ ಗೀತೆಗಳಿಂದಲೂ ಈ ಕಾಲದ ವಾತಾವರಣವೂ ತುಂಬಿ ಹೋಯ್ತು.

ಕನ್ನಡ ಸಾಹಿತ್ಯ ಚರಿತ್ರೆಯ ನಾಲ್ಕನೆಯ ಕಾಲಾವಧಿಯು ಹಳಗನ್ನಡದ ಚಂಪೂ ಪರಂಪರೆಯ ಪುನಶ್ಚೇತನದಿಂದ ವಿಶಿಷ್ಟವಾದುದು. ಪ್ರತಿಭಾವಂತ ವೀರಶೈವ ಕವಿಯೆನಿಸಿದ ಷಡಕ್ಷರದೇವನು ತನ್ನ ಮೂರು ಕಾವ್ಯಗಳನ್ನು ಚಂಪೂ ರೂಪದಲ್ಲಿ ವೈಭವ ಪೂರ್ಣ ಹಾಗೂ ಪ್ರೌಢ ಮಾರ್ಗ ಶೈಲಿಯಲ್ಲಿ ರಚಿಸಿದ್ದಾನೆ. ಮೈಸೂರು ಚಿಕದೇವರಾಜ ಒಡೆಯರ ಮಂತ್ರಿಯು ಶ್ರೀ ವೈಷ್ಣವ ಪಂಡಿತ ಕವಿಯೂ ಆಗಿದ್ದ ತಿರುಮಲಾರ್ಯನು ರಚಿಸಿದುದೆಲ್ಲವೂ ತನ್ನ ಆಶ್ರಯದಾತನನ್ನು ಹಾಗೂ ಆತನ ಸಾಹಸ ಕೃತ್ಯಗಳನ್ನು ಕುರಿತ ಕಾವ್ಯಗಳು. ಆತನ ಚಿಕದೇವರಾಜ ವಿಜಯವು ಚಂಪೂ ಕೃತಿಯಾಗಿದ್ದು, ಚಿಕದೇವರಾಜ ವಂಶಾವಳಿಯು ಒಂದು ವಿಶಿಷ್ಟ ಗದ್ಯ ಕೃತಿಯಾಗಿದೆ. ಈತನ ಸಮಕಾಲೀನನಾಗಿದ್ದ ಚಿಕುಪಾಧ್ಯಾಯನು ಮೂವತ್ತಕ್ಕಿಂತ ಹೆಚ್ಚು ಗ್ರಂಥಗಳನ್ನು ರಚಿಸಿದ್ದು, ಅವುಗಳಲ್ಲಿ ದಿವ್ಯ ಸೂರಿ ಚರಿತೆ ಒಂದು ಸುಪ್ರಸಿದ್ಧ ಚಂಪೂ ಕಾವ್ಯ. ಲಿಂಗಣ್ಣನು ತನ್ನ ಕೆಳದಿನೃಪವಿಜಯವೆಂಬ ಒಂದು ಮಹತ್ವಪೂರ್ಣ ಐತಿಹಾಸಿಕ ಕಾವ್ಯವನ್ನು ಚಂಪೂ ರೂಪದಲ್ಲಿ ಬರೆದಿದ್ದಾನೆ.

ಇದಿಷ್ಟು ಹಳಗನ್ನಡದಲ್ಲಿ ಸೃಷ್ಟಿಯಾದ ಮಾರ್ಗ ಕಾವ್ಯದ ಸಂಕ್ಷಿಪ್ತ ಕಥೆ. ಈ ಪರಂಪರೆಯ ಏಳು-ಬೀಳಿನಲ್ಲೂ ಕೆಲವಾದರೂ ಉತ್ಕೃಷ್ಟ ಮಾರ್ಗ ಕಾವ್ಯಗಳು ಎದ್ದು ಕಾಣುವಂತಿವೆ.

ಇಂಗ್ಲೀಷ್ ಮೂಲ ಲೇಖಕರು : ರಂ. ಶ್ರೀ. ಮುಗಳಿ

ಅನುವಾದಕರು : ಎಸ್. ಆರ್. ಮಳಗಿ

# ಸಾಹಿತ್ಯದಲ್ಲಿ ರಸದ ಉದ್ದೇಶ

**ಎಸ್.ಆರ್.ಮಳಗಿ**

ಸಾಹಿತ್ಯದಲ್ಲಿ ರಸದ ಉದ್ದೇಶವನ್ನು ಕುರಿತು ಶ್ರೇಷ್ಠ ಸಾಹಿತಿ ಮಾಸ್ತಿಯವರು ಹೀಗೆ ಹೇಳಿದ್ದಾರೆ : ಅವರ ಅಭಿಪ್ರಾಯದ ಸಾರವಿದು: ಸಾಹಿತ್ಯ ಸಾರ್ಥಕವಾಗುವುದು ರಸದಿಂದ. ಅದು ಸಾಹಿತ್ಯ ನಿರ್ಮಾಣದ ಬೇರು; ಹಾಗಯೇ ಅದರ ಕೊನೆಯೂ ಅಹುದು. ಕವಿ ಯಾವುದೋ ಅನುಭವದಿಂದ ರಸಾವೇಶಭರಿತನಾಗುತ್ತಾನೆ. ಆಹ! ಎಂದು ಉದ್ಗರಿಸುತ್ತಾನೆ. ಆಗ ಕಂಡ ತನ್ನ ದರ್ಶನವನ್ನು ತನ್ನ ಕೃತಿಯಲ್ಲಿ ರೂಪಿಸುತ್ತಾನೆ. ಈ ರೂಪಣವು ಕಲೆಯ ಮಟ್ಟಕ್ಕೆ ಬಂದರೆ ಈ ಕೃತಿಯನ್ನು ಓದುವ ಸಹೃದಯನು ಕವಿ ಪಡೆದ ರಸಾನುಭವವನ್ನು ತಾನೂ ಪಡೆಯುತ್ತಾನೆ. ಆಹ ! ಎಂದು ಆತನೂ ಉದ್ಗರಿಸುತ್ತಾನೆ. ಕವಿಯಲ್ಲಾಗಲಿ ಕೃತಿಯಲ್ಲಾಗಲಿ ಅನುಭವ ಈ ಮಟ್ಟಕ್ಕೆ ಮುಟ್ಟುವುದೇ ರಸ.

ಗೆದ್ದೆನೆಂಬ ಸಾಹಿತ್ಯ ರಸದಿಂದ ಹುಟ್ಟಿರಬೇಕು ; ರಸವನ್ನು ಮುಟ್ಟಿರಬೇಕು. ಎಂದ ಮೇಲೆ ಸಾಹಿತ್ಯದಲ್ಲಿ ರಸದ ಉದ್ದೇಶ ಸಾಹಿತ್ಯದ ಉದ್ದೇಶವನ್ನು ಸಾಧಿಸಿ ಕೊಡುವುದು.

ಕವಿಯ ಜೀವ ತಕ್ಕಷ್ಟು ಉದಾತ್ತವಾದ ಕಾವ್ಯಾನುಭವವನ್ನು ಪಡೆದಾಗ ಬ್ರಹ್ಮಾನಂದ ಸದೃಶವಾದ ಸ್ಥಿತಿಯನ್ನು ಮುಟ್ಟುತ್ತದೆ ಎಂದು ನಮ್ಮ ಪ್ರಾಚೀನ ಕಾವ್ಯ ಮೀಮಾಂಸಕರು ಹೇಳುತ್ತಾರೆ. ಕವಿ ಜೀವ ಈ ಬಗೆಯ ಆನಂದವನ್ನು ಅನುಭವಿಸಿ ಅದರ ಸವಿಯನ್ನು ತನ್ನ ಜೊತೆಯ ಸಹೃದಯ ಜೀವಕ್ಕೆ ಸವಿಸಲು ಬಯಸುತ್ತದೆ.

ಸಾಮಾನ್ಯ ಜೀವ ಎಳೆಯ ಜೀವ. ಅದೂ ರಸಾನುಭವವನ್ನು ಬಯಸುತ್ತದೆ. ಆದರೆ ಅದನ್ನು ಪಡೆಯುವುದು ಹೇಗೆಂದು ಕಾಣದು. ಇಲ್ಲಿ ವಿಷಯವನ್ನು ಸ್ಪಷ್ಟಪಡಿಸಲು ಮಾಸ್ತಿಯವರು ಒಂದು ಉಪಮೆಯನ್ನು ಉದಾಹರಿಸುತ್ತಾರೆ. ಅದು ಹೀನೋಪಮೆಯೆಂದು ದಯವಿಟ್ಟು ಭಾವಿಸಬಾರದು. ಉಪಮೆಯ ಸಾರ್ಥಕತೆಯನ್ನೂ ತಾತ್ಪರ್ಯಾರ್ಥವನ್ನೂ ಗ್ರಹಿಸಬೇಕು. ಅವರು ಕೊಡುವ ಉಪಮೆಯ ಉದಾಹರಣೆ ಇದು. ನಾಯಿ ಒಣ ಮೂಳೆಯನ್ನು ಕಡಿಯುತ್ತ ವೃಥಾ ತೊಳಲುತ್ತಿರುವುದನ್ನು ನಾವೆಲ್ಲ ನೋಡುತ್ತೇವಷ್ಟೆ ? ಅದು ತೊಳಲುತ್ತಿರುವುದು ಮೂಳೆಗೆ ಅಂಟಿದ ಮಾಂಸಖಂಡದ ನೆನವಿನಿಂದ ; ಮೂಳೆಯೊಳಗಿರುವ ತಿರುಳ ಕನಸಿನಿಂದ. ಜೀವನದ ರಸ ಸಾಮಗ್ರಿಯನ್ನು ಕಂಡ ಸಾಮಾನ್ಯ ಜೀವ ಅದನ್ನು ವೃಥಾ ಕಡಿಯುತ್ತ ತೊಳಲುತ್ತದೆ. ಇದಕ್ಕೆ ಅಂಟಿಕೊಂಡಿರುವ ಸುಖ ಎಲ್ಲಿ ? ಇದರೊಳಗಿರುವ ತಿರುಳು ಏನು? ಎಂದು ಕೇಳುತ್ತದೆ. ಕವಿ ಇದನ್ನು ಬಲ್ಲ ; ಹೇಳಬಲ್ಲ. ಹೇಳಿದಾಗ ಬ್ರಹ್ಮಾನಂದವನ್ನೇ ಸವಿಸುತ್ತಾನೆ. ರಸಋಷಿಯೇ ಆಗುತ್ತಾನೆ.

# ಇಂದಿನ ಶಿಕ್ಷಣ

**ಎಸ್.ಆರ್.ಮಳಗಿ**

ಸುಮಾರು ನಲವತ್ತು ವರುಷಗಳ ಕಾಲ ಅಧ್ಯಾಪನ ವೃತ್ತಿಯಲ್ಲಿ ಸೇವೆ ಸಲ್ಲಿಸಿ, ಈ ಇಪ್ಪತ್ತು ವರುಷಗಳ ಕಾಲ ನಿವೃತ್ತಿ ಜೀವನ ನಡೆಸುತ್ತಿರುವ ನನಗೆ, ಇಂದಿನ ಮತ್ತು ಹಿಂದಿನ ವಿದ್ಯಾರ್ಥಿ ಜೀವನ, ಅಧ್ಯಾಪನ ವೃತ್ತಿ, ಶಿಕ್ಷಣ ಪದ್ಧತಿ ಮತ್ತು ಒಟ್ಟಿನ ಶೈಕ್ಷಣಿಕ ವಾತಾವರಣ - ಇವುಗಳಲ್ಲಿಯ ಸ್ಥಿತ್ಯಂತರ ಒಡೆದು ಕಾಣುತ್ತದೆ.

ಶಿಕ್ಷಣವು ಪ್ರತ್ಯಕ್ಷವಾಗಿ ಮತ್ತು ಅಪ್ರತ್ಯಕ್ಷವಾಗಿ ಸದಾ ನಡೆದೇ ಇರುತ್ತದೆ. ಮನೆಯಲ್ಲಿ ತಾಯ್ತಂದೆಗಳ ಮೂಲಕ ಮತ್ತು ಶಾಲೆ-ಕಾಲೇಜುಗಳಲ್ಲಿ ಅಧ್ಯಾಪಕ-ಪ್ರಾಧ್ಯಾಪಕರ ಮೂಲಕ ದೊರೆಯುತ್ತಿರುವುದು ಪ್ರತ್ಯಕ್ಷ ಶಿಕ್ಷಣ. ನಮ್ಮಸುತ್ತಣ ಸಮಾಜದ ಮೂಲಕ ನಿತ್ಯ ನಿರಂತರ ಒದಗುತ್ತಿರುವುದು ಅಪ್ರತ್ಯಕ್ಷ ಶಿಕ್ಷಣ. ಈ ದಿಶೆಯಲ್ಲಿ ಸಿನೇಮಾ-ನಾಟಕ ಪ್ರದರ್ಶನಗಳು, ವೃತ್ತ ಪತ್ರಿಕೆ-ಮಾಸ ಪತ್ರಿಕೆಗಳು, ಪಠ್ಯೇತರ ಕಥೆ ಕಾದಂಬರಿಗಳು, ಸಾಮಾಜಿಕ-ರಾಜಕೀಯ-ಸಾಂಸ್ಕೃತಿಕ ಸಭೆ-ಸಮ್ಮೇಲನಗಳು, ವಿವಿಧ ವಸ್ತು ಪ್ರದರ್ಶನಗಳು ಮತ್ತು ಆಕಾಶವಾಣಿ-ದೂರದರ್ಶನಗಳು-ಈ ಮಾಧ್ಯಮಗಳು ಹಲ ಬಗೆಯ ವಿದ್ಯೆಯನ್ನು ಒದಗಿಸುತ್ತಲೇ ಇರುತ್ತವೆ. ಈ ಸೌಲಭ್ಯಗಳು ಸ್ವಾತಂತ್ರ್ಯ ಪೂರ್ವದ ಬ್ರಿಟಿಶ್ ಆಡಳಿತಕಾಲದ ವಿದ್ಯಾರ್ಥಿಗಳಿಗೆ ಈ ಪ್ರಮಾಣದಲ್ಲಿ ಲಭ್ಯವಿರಲಿಲ್ಲ.

ಇಂದಿನ ಶಿಕ್ಷಣ ರಂಗದಲ್ಲಿಯ ಬಹು ಮುಖ್ಯ ಸ್ಥಿತ್ಯಂತರವೆಂದರೆ, ಶಿಕ್ಷಕ-ವಿದ್ಯಾರ್ಥಿಗಳ ನಡುವಿನ ಪರಸ್ಪರ ಸಂಬಂಧದ ವಿಚಾರ. ಈಗ ಜನಸಂಖ್ಯೆ ವಿಪರೀತ ಹೆಚ್ಚಿರುವುದರಿಂದ, ಈ ಪ್ರಮಾಣಕ್ಕನುಸಾರವಾಗಿ, ವಿದ್ಯಾರ್ಥಿಗಳ ಸಂಖ್ಯೆ ಮತ್ತು ಶಿಕ್ಷಕರ ಸಂಖ್ಯೆ ಎರಡೂ ಹೆಚ್ಚಿವೆ. ಇದರಿಂದ ಶಿಕ್ಷಕ-ವಿದ್ಯಾರ್ಥಿ ಸಂಬಂಧದ ಸಮಸ್ಯೆಗಳೂ ಉಲ್ಬಣಗೊಂಡಿವೆ. ಇಂದಿನ ವಿದ್ಯಾರ್ಥಿಗಳಿಗೆ, ತಪ್ಪು ತಿದ್ದುವ ನೆವದಲ್ಲಿ, ಶಿಕ್ಷಕರು ಹಿಂದಿನ ಶಿಕ್ಷಕರಂತೆ ಬಯ್ಗುಳನ್ನು ಬಳಸುವ ಹಾಗಿಲ್ಲ ; ಬೆತ್ತದ ಲತ್ತಾ ಪ್ರಹಾರವಂತೂ ನಿಷಿದ್ಧ ; ಕಾನೂನು ಬಾಹಿರ. ಅಧ್ಯಾಪನ ಗಾಂಭೀರ್ಯ ತಗ್ಗದ ಹಾಗೆ, ಕ್ರೀಡಾ ಮನೋವೃತ್ತಿಯಿಂದ, ಪ್ರೀತಿ ವಾತ್ಸಲ್ಯಗಳಿಂದ, ದಕ್ಷತೆಯಿಂದ, ಕಲಿಸಿಯೂ ಕಲಿಸದಂತೆ ಅಧ್ಯಾಪನ ಕಾರ್ಯ ನಡೆಯಬೇಕು. ಶಿಕ್ಷಕನ ವ್ಯಕ್ತಿತ್ವದ ಪ್ರಭಾವವು ಬಾಲಕ-ಬಾಲಕಿಯರ ಮೇಲಾಗಿ ಅವರ ವ್ಯಕ್ತಿತ್ವ ಬೆಳಗುವಂತಾಗಬೇಕು. ಶಿಕ್ಷಣವು ಒಂದು ಉದಾತ್ತ ಕಲೆ; ಶಿಕ್ಷಕನು ಒಬ್ಬ ಕಲಾವಿದ. ಇಂಥ ಶೈಕ್ಷಣಿಕ ವಿಚಾರಗಳು ಈ ಹಿಂದೆ ಇರಲಿಲ್ಲವೆಂದಲ್ಲ. ಆದರೆ ಅಂದಿನ ಶಿಕ್ಷಕರಲ್ಲಿ ಇವುಗಳನ್ನು ಕಾರ್ಯಗತಗೊಳಿಸುತ್ತಿದ್ದವರು ತೀರ ವಿರಳ. ಅಂದಿನ ಶಿಕ್ಷಕರು ವರ್ಗದೊಳಗೆ ಕಾಲಿಟ್ಟರೋ ಸ್ತಬ್ಧ ಶಾಂತಿ ಆವರಿಸುತ್ತಿತ್ತು ! ಶಿಕ್ಷಕರನ್ನು ಕಂಡಾಗಲೆಲ್ಲ ಅಂದಿನ ವಿದ್ಯಾರ್ಥಿಗಳಿಗೆ ನಡುಕ ಹುಟ್ಟುತ್ತಿತ್ತು ! ಅಂದಿನ ಶಿಕ್ಷಕರು ವರ್ಗಗಳಲ್ಲಿ ಮತ್ತು ಹೊರಗೆ ಕೂಡ ನಿರಂಕುಶ ಪ್ರಭುಗಳು! ಯಮ ಸದೃಶರು! ಹೊರಗೆ ಹಾದಿಯಲ್ಲಿ ಎಲ್ಲಿಯಾದರೂ ಈ ಶಿಕ್ಷಕರನ್ನು ಕಂಡಾಗ ಹೆದರಿ ಓಡಿ ಹೋಗುವ ಪುಕ್ಕಲುತನ ಅಂದಿನ ಬಾಲಕರದಾಗಿತ್ತು. ತಪ್ಪು ಮಾಡಿದ ವಿದ್ಯಾರ್ಥಿಗಳಿಗೆ ಅವಾಚ್ಯ ಬಯ್ಗುಳೊಂದಿಗೆ ಹೊಡೆತಗಳು ಅಂದಿನ

ರೂಢಿಯ ಶಿಕ್ಷೆಗಳಾಗಿದ್ದವು. ವಿದ್ಯೆ ತಲೆಗೆ ಹತ್ತಬೇಕಾದರೆ ಇಂಥ ಶಿಕ್ಷೆಗಳು ತೀರ ಆವಶ್ಯಕ ಎಂಬ ಭ್ರಾಮಕ ಕಲ್ಪನೆಗಳೂ ಆಗ ಪ್ರಚಲಿತವಿದ್ದವು. ಹಲಕೆಲವು ತಿಳಿಗೇಡಿ ಪಾಲಕರು ಮನೆಯಲ್ಲಿ ತಮ್ಮ ಮಕ್ಕಳನ್ನು ದಂಡಿಸಿಯೇ ದಾರಿಗೆ ತರಲು ಯತ್ನಿಸುತ್ತಿದ್ದರು.

ಆದರೆ ಇಂದು ? ಇದೆಲ್ಲ ತಲೆಕೆಳಗಾಗಿದೆ. ಶಿಕ್ಷಕನೇನಾದರೂ ತಪ್ಪಿ ಇಂದಿನ ವಿದ್ಯಾರ್ಥಿಗಳಿಗೆ ಬಯ್ದರೆ ಇಲ್ಲವೆ ಕೈಮಾಡಿದರೆ ತಕ್ಷಣವೆ ಆತ ಪ್ರತಿಭಟಿಸುತ್ತಾನೆ ! ಮನೆಯಲ್ಲಿ ದಂಡಿಸುವ ತಾಯ್ತಂದೆಗಳಿಗೂ ಹೀಗೆಯೇ ಎದುರು ನಿಲ್ಲುತ್ತಾನೆ. ಪ್ರೌಢ ಶಿಕ್ಷಣದ ವಿದ್ಯಾರ್ಥಿಗಳು ಶಿಕ್ಷಕರು ಮಾಡುವ ಅನ್ಯಾಯಕ್ಕೆ ಸಿಡಿದೇಳುತ್ತಾರೆ. ಒಟ್ಟಾಗಿ ವರ್ಗಗಳಿಗೆ ಬಹಿಷ್ಕಾರ ಹಾಕುವುದೂ, ದಂಗೆಯೇಳುವುದೂ ಸಾಮಾನ್ಯ ಸಂಗತಿ. ಇಂದು ವಿದ್ಯಾರ್ಥಿ ವರ್ಗ ಜಾಗೃತಗೊಂಡಿದೆ. ರಾಜ್ಯ ಮಟ್ಟದ, ರಾಷ್ಟ್ರ ಮಟ್ಟದ ವಿದ್ಯಾರ್ಥಿ ಸಂಘಗಳು ಏರ್ಪಟ್ಟಿವೆ. ರಾಜಕೀಯ ಶಕ್ತಿಗಳ ಬೆಂಬಲವೂ ಇವುಗಳಿಗಿದೆ. ಇತ್ತ ಶಿಕ್ಷಕ ವರ್ಗದವರೂ ತಾವು ಶೋಷಿತ ವರ್ಗದವರೆಂದು ಸಂಘ-ಸಂಸ್ಥೆ ಕಟ್ಟಿಕೊಂಡು ಸರ್ಕಾರದ ವಿರುದ್ಧ ಬೀದಿಗಿಳಿಯುತ್ತಿದ್ದಾರೆ ! ಸ್ವಾತಂತ್ರ್ಯ ಪೂರ್ವದಲ್ಲಿ ಹಿಂದೆಂದೂ ಕಾಣದ, ಕೇಳದ ಸ್ಥಿತ್ಯಂತರವಿದು. ಇಂಥ ಶೈಕ್ಷಣಿಕ ವಾತಾವರಣದಲ್ಲಿ ಅಲ್ಪ ಸಂಖ್ಯೆಯ ಆದರ್ಶ ವಿದ್ಯಾರ್ಥಿಗಳ, ಆದರ್ಶ ಶಿಕ್ಷಕರ ಪಾಡನ್ನು ಕೇಳುವವರಾರು ? ಇಂದಿನ ಶೈಕ್ಷಣಿಕ ವಾತಾವರಣ ತಿಳಿಯಾಗುವುದೆಂತು ? ಈ ಪ್ರಶ್ನೆಗೆ ನನ್ನ ಒಳ ದನಿ ಮುನ್ನರಿತು ನುಡಿಯುತ್ತದೆ; ಹತಾಶೆ ಸಲ್ಲದು; ಕಾಳರಾತ್ರಿ ಬರಲಿರುವ ಭವ್ಯ ಸೂರ್ಯೋದಯದ ಮುನ್ಸೂಚನೆ ಎಂದು !

# ಗುರುನಾನಕರ ತತ್ತ್ವ ವಿಚಾರಗಳು

ಎಸ್.ಆರ್.ಮುಳಗಿ

ಶಿಖ್‌ಧರ್ಮದ ಸಂಸ್ಥಾಪಕರೂ ಈ ಧರ್ಮಪೀಠದ ಪ್ರಥಮ ಗುರುವೂ ಆಗಿದ್ದ ಗುರು ನಾನಕರು ಇಂದಿಗೆ ಸುಮಾರು ಐದುನೂರು ವರುಷಗಳ ಹಿಂದೆ ಇದ್ದರು. (ಕ್ರಿ.ಶ.1469-1538). ಅವರು ಪಂಜಾಬದ ನಾನ್‌ಕಾನಾಸಾಹೇಬ್ ತಳವಂಡಿಯಲ್ಲಿ ಜನ್ಮತಳೆದರು. ಅವರು ಭಾರತದ ತುಂಬೆಲ್ಲ ಪ್ರವಾಸ - ಗೈದರಲ್ಲದೆ, ಪರ್ಶಿಯ, ತುರ್ಕಸ್ಥಾನ, ಇರಾಕ್ ದೇಶಗಳಿಗೂ ಮೆಕ್ಕಾಪಟ್ಟಣಕ್ಕೂ ಭೇಟಿಯಿತ್ತರು. ಹೋದಲ್ಲೆಲ್ಲ ಅವರು ಶಿಖ್ ಧರ್ಮದ ಉದಾರ ತತ್ತ್ವಗಳನ್ನೂ ಸಾಮಾಜಿಕ ನಂಬಿಕೆಗಳನ್ನೂ ಬೋಧಿಸುತ್ತಿದ್ದರು. ಮತ್ತು ತಮ್ಮ ಜೀವನ ಹಾಗೂ ತತ್ವೋಪದೇಶಗಳಿಂದ ಹಿಂದೂ ಮತ್ತು ಇಸ್ಲಾಮ್ ಧರ್ಮಗಳ ಸಾಮರಸ್ಯಕ್ಕಾಗಿ ಯತ್ನಿಸಿದರು. ಅವರು ಹಲವಾರು ಧರ್ಮಬೋಧಕ ಭಕ್ತಿಗೀತೆಗಳನ್ನು ರಚಿಸಿದರು. ಅವೇ ಕೇಂದ್ರಸ್ಥಾನದಲ್ಲಿದ್ದು ಶಿಖ್‌ಧರ್ಮದ ಪವಿತ್ರ 'ಗ್ರಂಥಸಾಹಿಬ್' ಸಿದ್ಧವಾಯ್ತು. ಗುರುನಾನಕರ ತರುವಾಯ ಒಬ್ಬರಾದ ಮೇಲೊಬ್ಬರಂತೆ ಒಂಭತ್ತು ಜನ ಪೀಠಸ್ಥಗುರುಗಳು ವಿರಾಜಿಸಿದರು. ಇವರ ನೇತೃತ್ವದಲ್ಲೆ ಶಿಖ್ ಧರ್ಮವು ಉತ್ತರೋತ್ತರವಾಗಿ ಬೆಳೆದು ಪೂರ್ಣವಾಗಿ ರೂಪುಗೊಂಡಿತು.

ಗುರು ಗೋವಿಂದ ಸಿಂಗರು ಈ ಧರ್ಮದ ಹತ್ತನೆಯ ಗುರು. ಇವರು ಗುರು ತೇಜ ಬಹದ್ದೂರರ ಮಗ. ಇವರು ಇದ್ದ ಕಾಲ ಕ್ರಿ.ಸ. 1675ರಿಂದ 1708. ಇವರು ನಾನಕರ ತರುವಾಯ ಬಂದ ಗುರುಗಳಲ್ಲಿ ಅತಿ ಪ್ರಖ್ಯಾತರು. ತಮ್ಮ ವಯಸ್ಸಿನ ಒಂಭತ್ತನೆಯ ವರುಷದಲ್ಲಿ ಗುರುಪೀಠಕ್ಕೆ ಬಂದು ಶಿಖ್‌ಧರ್ಮದ ಕ್ಷೇತ್ರತೇಜಸ್ಸಿನ ದೇವಪ್ರಭುತ್ವದ ಖಾಲ್ಸಾ ಸಂಸ್ಥೆಯನ್ನು ಸ್ಥಾಪಿಸಿದರು. ಇವರ ನೇತೃತ್ವದಲ್ಲಿ ಶಿಖ್‌ಧರ್ಮವು ಪ್ರಬಲಗೊಂಡಿತು; ಶಿಖ್‌ಧರ್ಮದ ಗುರು ಪರಂಪರೆಯನ್ನು ನಿಲ್ಲಿಸಿ ಗುರುವಿನ ಸ್ಥಾನದಲ್ಲಿ 'ಗ್ರಂಥಸಾಹಿಬ್'ವನ್ನೇ ಪ್ರತಿಷ್ಠಾಪಿಸಿದರು. ಶಿಖ್‌ಧರ್ಮಕ್ಕೋಸುಗ ಇವರು ನಡೆಸಿದ ಹೋರಾಟಗಳಲ್ಲಿ ಇವರಿಬ್ಬರು ಮಕ್ಕಳು ಹುತಾತ್ಮರಾದರು. ಕೊನೆಗೆ ಇವರೂ ಕೊಲೆ ಮಾಡಲ್ಪಟ್ಟು ಹುತಾತ್ಮರೆನಿಸಿದರು. ಇವರು ಉದಾತ್ತ ಸ್ವಭಾವದವರೂ ಮಹಾ ಯೋಧರೂ ಆಗಿದ್ದರು. ಇವರ ಅಪ್ರತಿಮ ವ್ಯಕ್ತಿತ್ವವು ಹಿಂದು-ಶಿಖ್‌ರಿಬ್ಬರಿಗೂ ಅತ್ಯಂತ ಸ್ಫೂರ್ತಿದಾಯಕವಾಗಿತ್ತು.

ಶಿಖ್‌ಧರ್ಮತತ್ತ್ವಗಳ ಪ್ರಕಾರ ಜೀವನದ ಗುರಿ ವೈಯಕ್ತಿಕ ಮುಕ್ತಿ ಪ್ರಾಪ್ತಿಯಾಗಲಿ ಸುಖಮಯ ಸ್ವರ್ಗ ಪ್ರಾಪ್ತಿಯಾಗಲೀ ಅಲ್ಲ . ನಮ್ಮೆಲ್ಲರೊಳಗಿನ ಪರಮ ವಸ್ತುವೆನಿಸಿದ ಭಗವಂತನ ಸಾಕ್ಷಾತ್ಕಾರ ಪಡೆಯುವುದು. 'ಭಗವಂತನ ಸಾಕ್ಷಾತ್ಕಾರಕ್ಕಾಗಿ ಹಂಬಲಿಸುವ ಭಕ್ತನಿಗೆ ಮೋಕ್ಷವಾಗಲಿ ಸ್ವರ್ಗವಾಗಲಿ ಕಃಪದಾರ್ಥ'. ಎಂದು ನಾನಕರ ವಾಣಿಯಿದೆ. ದೇವರ ಸಾಕ್ಷಾತ್ಕಾರ ಪಡೆಯುವುದು ಹೇಗೆ ? ಅವನನ್ನು ಪ್ರೀತಿಸುವುದು ಹೇಗೆ ? ಎಂಬ ಪ್ರಶ್ನೆಯನೆತ್ತಿಕೊಂಡು ಗುರುನಾನಕರು ಹೀಗೆ ನುಡಿದಿದ್ದಾರೆ :-

'ಭಗವಂತನ ಸಭಾಮಂದಿರವನ್ನು ನೋಡಬೇಕಾದರೆ ಅವನಿಗೆ ನಾವೇನನ್ನರ್ಪಿಸೋಣ ? ಅವನ

ಪ್ರೀತಿಗೋಸುಗ ಅವನನ್ನು ಹೇಗೆ ಸ್ತುತಿಸೋಣ ? ಸುಪ್ರಭಾತದ ಅಮೃತಸಮಯದಲ್ಲಿ ಭಗವಂತನ ನಿಜನಾಮದ ಅನುಗ್ರಹಕ್ಕಾಗಿ ಧ್ಯಾನಿಸು. ನಿನ್ನ ಸತ್ಕೃತಿಗಳಿಂದ ನಿನಗೆ ಒಳ್ಳೆಯ ಜನುಮ ಲಭಿಸಬಹುದು; ಆದರೆ ಸಂಸಾರಬಂಧನದಿಂದ ಬಿಡುಗಡೆ ಮಾತ್ರ ಭಗವಂತನ ಅನುಗ್ರಹದಿಂದಲೇ ಸಾಧ್ಯ'.

'ಭಗವಂತನ ನಾಮವನ್ನು ಭಕ್ತಿಯಿಂದ ಜಪಿಸೋಣ; ನಾಮದಲ್ಲಿ ಶ್ರದ್ಧೆಯಿರಲಿ; ನಾಮವೇ ನಿತ್ಯವಾದುದು, ಸತ್ಯವಾದುದು', ನಾಮಜಪಸಾಧನೆಯನ್ನು ಶಿಖ್‌ಗ್ರಂಥಗಳಲ್ಲಿ ಮತ್ತೆ ಮತ್ತೆ ಒತ್ತಿ ಹೇಳಲಾಗಿದೆ.

ಭಗವಂತನು ನಿರ್ಗುಣನೂ ಅಹುದು, ಸಗುಣನೂ ಎಂದರೆ ಸುಗುಣನೂ ಅಹುದು ಎಂಬುದು ಶಿಖ್‌ಧರ್ಮದ ನಂಬುಗೆ. ಸೃಷ್ಟಿಯ ಉದಯಕ್ಕೆ ಮುಂಚೆ ಭಗವಂತನು ತನ್ನೊಳಗೆ ಮಗ್ನನಾಗಿದ್ದ, ಆದರೆ ಯಾವಾಗ ಈ ಸೃಷ್ಟಿಯ ಮೂಲಕ ತನ್ನನ್ನೂ ಆವಿರ್ಭವಿಸಿಕೊಳ್ಳಲು ಇಚ್ಛಿಸಿದನೋ ಆಗ ಆತನು ಸಂಬಂಧ ಸಾಮ್ರಾಜ್ಯದಲ್ಲಿ ಪ್ರವೇಶಿಸಿದನು. ಭಗವಂತನು ನಿರ್ಗುಣನಿದ್ದಾಗ ಅವನು ಸ್ವಯಂಭುವಾಗಿದ್ದ. ತನ್ನನ್ನು ತಾನೇ ಆಲೋಚಿಸಿ ಸೃಷ್ಟಿಯನ್ನು ಕಲ್ಪಿಸಿದನು. ಆಗ ಸ್ವರ್ಗ-ನರಕಗಳಾಗಲಿ ಬೇರಾವುದಾಗಲಿ ಇರಲಿಲ್ಲ. ಆಗಿನ್ನೂ ಸೃಷ್ಟಿ ಉದ್ಭವಿಸಿರಲಿಲ್ಲ. ಆಗ ಪಾಪ-ಪುಣ್ಯಗಳಾಗಲಿ, ವೇದಾದಿಗಳಾಗಲಿ, ಜಾತಿಲಿಂಗಗಳಾಗಲಿ ಇರಲಿಲ್ಲ. ಭಗವಂತನು ಯಾವಾಗ ಸಗುಣನಾದನೋ ಆಗ ಆತನು 'ನಾಮ' ಎನಿಸಿಕೊಂಡನು ಅನಂತರ ಪ್ರಕೃತಿಯನ್ನು ಸೃಷ್ಟಿಸಿ ಅದರ ತುಂಬ ಒಳಹೊರಗೆಲ್ಲ ವ್ಯಾಪಿಸಿದನು. ಆತನು ಪ್ರೇಮರೂಪ. ಇವೇ ಶಿಖ್‌ಧರ್ಮದ ತತ್ವ ವಿಚಾರಗಳು ಹಾಗೂ ನಂಬಿಕೆಗಳು.

19-10-1989

ಶ್ರೀ ಮಾತೆಯವರ ಅಮೃತ ವಾಣಿ

# ಭಗವಂತನು ನಿಮ್ಮ ಶ್ರೇಷ್ಠ ಗೆಳೆಯ

**ಎಸ್.ಆರ್. ಮಳಗಿ**

ಭಗವಂತನು 'ನಿಮ್ಮ ಶ್ರೇಷ್ಠ ಗೆಳೆಯ' - 'Your Best Friend' ಎಂದು ಶ್ರೀ ಮಾತೆಯವರು ಆಶ್ರಮದ ಸಾಧಕ- ಶಿಷ್ಯರಿಗೆ ಹೇಳುತ್ತಾರೆ. ಈ ಮಾತು ತುಂಬಾ ಮನನೀಯ.

ಭಗವಂತನು ನಮ್ಮ ಶ್ರೇಷ್ಠ ಗೆಳೆಯ ಹೇಗೆಂದರೆ,- ಅವನಿಗೆ ನಮ್ಮ ಹೃದಯವನ್ನು ಪೂರ್ತಿಯಾಗಿ ತೆರೆದಿಡಬಹುದು. ನಮ್ಮ ಹೃದಯಾಂತರಾಳದಲ್ಲಿ ಅನಿಸಿದ್ದೆಲ್ಲವನ್ನೂ ಆತನ ಮುಂದೆ ಇಡಬಹುದು; ಆತನ ಸಲಹೆ ಕೇಳಬಹುದು. ನಮ್ಮೆಲ್ಲರ ಹೃದಯಗಳಲ್ಲಿ ಮತ್ತು ವಿಶ್ವದ ಚರಾಚರ ವಸ್ತುಗಳಲ್ಲಿ ಎಲ್ಲೆಲ್ಲೂ ಪರಮಾತ್ಮನಿದ್ದಾನೆ. ಎಲ್ಲ ದಯೆ, ಕರುಣೆ, ಅನುಕಂಪ, ಸಹಾನುಭೂತಿ ಇವುಗಳ ನಿಜವಾದ ಉಗಮ ಸ್ಥಾನ. ಆತನೇ - ನಾವು ಯಾವಾಗಲೂ ಮಾಡುತ್ತಿರುವ ತಪ್ಪುಗಳನ್ನು,- ನಾವು ಅವುಗಳನ್ನು ಮತ್ತೆ ಮತ್ತೆ ಮಾಡುವುದನ್ನು ಬಿಟ್ಟುಕೊಟ್ಟಿಲ್ಲ - ಅವೆಲ್ಲವನ್ನೂ ಆತನು ಒರೆಸಿ ಹಾಕುತ್ತಾನೆ. ಆ ಶಕ್ತಿಯ ಮೂಲವೂ ಆತನೇ. ಹಾಗೆ ಮಾಡುತ್ತ, ನಮ್ಮ ಮನಸ್ಸನ್ನು ಪರಿಶುದ್ಧಗೊಳಿಸುತ್ತಾನೆ. ಮತ್ತು ನಮ್ಮ ಜೀವನದ ನಿಜವಾದ ಸಿದ್ಧಿಯ ರಾಜ ಮಾರ್ಗವನ್ನು ತೆರೆದು ತೋರುತ್ತಾನೆ ! ನಮ್ಮ ದೈಹಿಕ, ಪ್ರಾಣಿಕ, ಮಾನಸಿಕ ಕಾಹಿಲೆಗಳನ್ನೆಲ್ಲ ಅರಿತು, ಅವುಗಳನ್ನು ಗುಣಪಡಿಸುವಾತನೂ ಆತನೇ. ಬಾಳ ದಾರಿಯಲ್ಲಿ ನಾವು ಸರಿಯಾಗಿ ನಡೆಯುವಂತೆ ನೆರವು ನೀಡುತ್ತ, ನಾವು ಎಡಹದಂತೆ, ಮುಗ್ಗರಿಸಿ ಬೀಳದಂತೆ ನೋಡಿಕೊಳ್ಳುತ್ತ, ನೆರವಾಗಿ ಗುರಿ ಮುಟ್ಟುವಂತೆ ಮಾರ್ಗದರ್ಶನ ಮಾಡುವಾತನೂ ಆತನೇ. ಆತನು ನಿಜವಾದ ಗೆಳೆಯ. ನಮ್ಮ ಸುದಿನ ದುರ್ದಿನಗಳೆರಡರಲ್ಲೂ ಬೆಂಬಲಕ್ಕಿರುವ ಗೆಳೆಯ. ಸರ್ವಜ್ಞನೂ ಸರ್ವರೋಗ ಪರಿಹಾರಕನೂ ಆಗಿರುವ ಭಗವಂತನು, ನಮ್ಮ ಬಳಿಯಲ್ಲಿಯೇ ನಮ್ಮೊಳಗೆ ಸದಾ ಇರುವ ಗೆಳೆಯನವನು. ಆತ್ಮಸಾಕ್ಷಿಯಾಗಿ ಪ್ರಾಮಾಣಿಕವಾಗಿ ನಾವು ಕರೆದಾಗಲೆಲ್ಲ ಈ ಗೆಳೆಯನು ಅತಿ ಹತ್ತಿರದಲ್ಲಿಯೇ ಇದ್ದು, ನಮ್ಮನ್ನು ಎತ್ತಿ ಹಿಡಿದು ಮಾರ್ಗದರ್ಶನ ಮಾಡುತ್ತಾನೆ. ನಮ್ಮನ್ನು ನಿಜವಾದ ರೀತಿಯಲ್ಲಿ ಪ್ರೀತಿಸುತ್ತಾನೆ.

ಆದ್ದರಿಂದ, ಇದನ್ನೆಲ್ಲ ಅರಿತುಕೊಂಡು ಭಗವಂತನ ಒಡೆತನಕ್ಕೇ ನಮ್ಮನ್ನು ಒಪ್ಪಿಸಿಕೊಂಡು, ಆತನಿಗಾಗಿ ಮಾತ್ರ ದುಡಿಯುತ್ತ ಇರಬೇಕು. ನಮಗೆ ಬೇಕಾದ ಶಕ್ತಿ, ಶಾಂತಿ ಮತ್ತು ಆತ್ಮ-ಸಂತೃಪ್ತಿಗಳನ್ನು ಆತನಿಂದ ಮಾತ್ರವೇ ನಿರೀಕ್ಷಿಸಬೇಕು. ಭಗವಂತನು ಸರ್ವಕರುಣಾಮಯಿ. ನಮಗೆ ಬೇಕಾದುದನ್ನೆಲ್ಲ ಕೊಟ್ಟು, ಜೀವನದ ಗುರಿಯನ್ನು ಆದಷ್ಟು ಬೇಗನೆ ತಲುಪುವಂತೆ ನಮ್ಮನ್ನು ಕೈಹಿಡಿದು ಕರೆದೊಯ್ಯುತ್ತಾನೆ !

ನಮ್ಮೊಳಗೆ ಹಗಲಿರುಳೂ ನಿರಂತರವಾಗಿ ವಾಸಿಸುವ ಭಗವಂತನ ಸಾನ್ನಿಧ್ಯದಿಂದಲೇ ನಮಗೆ ಬೆಲೆ. ಈ ಭಗವತ್ ಸಾನ್ನಿಧ್ಯವು ಸಕಲ ಶಾಂತಿ, ತುಷ್ಟಿ, ಕ್ಷೇಮಗಳ ಉಗಮ ಸ್ಥಾನ. ಈ ದೈವೀ ಸಾನ್ನಿಧ್ಯವನ್ನು ಕಂಡು ಹಿಡಿದ ತಕ್ಷಣವೆ ನಮ್ಮೆಲ್ಲ ತೊಂದರೆಗಳು ಅದೃಶ್ಯವಾಗುತ್ತವೆ. ಧ್ಯಾನಸ್ಥರಾಗಿ ನಮ್ಮೊಳಗೆ ನಾವು ನೋಡಿಕೊಂಡರೆ ಸಾಕು, ಆ ಸಾನ್ನಿಧ್ಯ ಗೋಚರಿಸುತ್ತದೆ. ಆದ್ದರಿಂದ ಸದಾ ಆತನನ್ನು ನೆನೆಯುತ್ತಿರಬೇಕು. ಆಗ ನಾವು ಆಡುವುದು,

ನೋಡುವುದು, ಮಾಡುವುದೆಲ್ಲ ಭಗವತ್ ಸಾನ್ನಿಧ್ಯದ ಅಭಿವ್ಯಕ್ತಿಯೇ ಎಂದು ಅರಿಯಬೇಕು.

ಇದಕ್ಕೆಲ್ಲ ಭಗವಂತನಲ್ಲಿ ನಮ್ಮ ಶ್ರದ್ಧೆ ಆವಶ್ಯಕ. ಶ್ರದ್ಧೆ ಹೊಂದಿರುವುದೇ ಒಂದು ಪವಾಡ ! ಪವಾಡಗಳನ್ನು ಸೃಷ್ಟಿಸುವುದೂ ಈ ಶ್ರದ್ಧೆಯೇ ! ನಮ್ಮನ್ನು ಉದ್ಧರಿಸೆಂದು ಶ್ರದ್ಧೆಯಿಂದ ಪ್ರಾರ್ಥಿಸಿದ ಕೂಡಲೆ ಭಗವಂತ ನಮ್ಮನ್ನು ಎತ್ತಿಕೊಂಡು ಅಪ್ಪಿಕೊಳ್ಳುತ್ತಾನೆ ! ಆತನು ಯಾವಾಗಲೂ ಹತ್ತಿರದಲ್ಲಿಯೆ ನಮ್ಮನ್ನು ಹೊಂದಿಕೊಂಡೇ ಇರುತ್ತಾನೆ !

10-01-2002

ಶ್ರೀ ಮಾತೆಯವರ ಅಮೃತವಾಣಿ

# ಹೊಸ ಹುಟ್ಟು

## ಚಿಂತನ

### ಎಸ್.ಆರ್.ಮಳಗಿ

ಈ ಭೂಮಿಯ ಮೇಲೆ ಹುಟ್ಟಿ ಬೆಳೆಯುತ್ತಿರುವ ಪ್ರತಿಯೊಬ್ಬನಿಗೂ 'ಹೊಸಹುಟ್ಟು' ಎಂಬುದೊಂದು ಇದೆಯೆಂದು ಪಾಂಡೀಚೆರಿಯ ಶ್ರೀ ಅರವಿಂದಾಶ್ರಮದ ಶ್ರೀಮಾತೆಯವರು ಹೇಳುತ್ತಾರೆ. ಆಧ್ಯಾತ್ಮಿಕ ಜೀವನವೇ ಈ 'ಹೊಸಹುಟ್ಟು'. ಆದರೆ ಈ ಹೊಸಹುಟ್ಟನ್ನು ತಳೆದವರೆಷ್ಟು ಜನ ? ಬೆರಳ ಮೇಲೆ ಎಣಿಸುವಷ್ಟು ಜನರೂ ದೊರೆಯರು ! ಈ ಬಗ್ಗೆ ಶ್ರೀ ಮಾತೆಯವರು ಹೇಳುವ ಮಾತುಗಳು ಅಮೂಲ್ಯ. ಅವುಗಳ ಸಾರವನ್ನೀಗ ಗ್ರಹಿಸುವ :

ಮಾನವರಾದ ನಾವೆಲ್ಲರೂ ಆತ್ಮದ ಒಂದಂಶವನ್ನು ನಮ್ಮೊಳಗೆ ಹೊತ್ತುಕೊಂಡೇ ಜೀವನದಲ್ಲಿ ಸಾಗಿರುತ್ತೇವೆ. ಅದು ನಮ್ಮೊಳಗಿನ ಅಂತರಾತ್ಮ. ಇದರ ಅರಿವು ಅನುಭವ ಪಡೆದಿರುವುದೇ 'ಹೊಸಹುಟ್ಟು' ಅಥವಾ ಆಧ್ಯಾತ್ಮಿಕ ಜೀವನ. ಇದೇ ನಿಜವಾದ ಜೀವನ. ಹೀಗೆ ಹೊಸಹುಟ್ಟು ತಳೆದಾಗ ಅಂತರಾತ್ಮವು ನಮ್ಮನ್ನು ಪ್ರಭುವಿನಂತೆ ಆಳುತ್ತಿರುತ್ತದೆ. ಆತ್ಮ ಅಂತರಾತ್ಮಗಳ ಅರಿವು ಮತ್ತು ಅನುಭವ ಗ್ರಂಥಗಳ ಓದಿನಿಂದ ಮಾತ್ರ ಬರುವುದಲ್ಲ. ಒಬ್ಬ ವ್ಯಕ್ತಿ ಸಾಮಾನ್ಯ ರೂಢಿಯ ಜೀವನ ತೊರೆದು, ಆತ್ಮದಲ್ಲಿ ಹೊಸಹುಟ್ಟು ಪಡೆದಾಗ, ಆತನಿಗೆ ಈ ಇಡಿಯ ಜಗತ್ತು ಹಾಗೂ ಜೀವನ ಹೊಸ ಜಗತ್ತಾಗಿ, ಹೊಸ ಜೀವನವಾಗಿ ಕಾಣುವ ಅನುಭವವುಂಟಾಗುತ್ತದೆ. ಈ ವಿಲಕ್ಷಣ ಅನುಭವವು ಆತನ ಚೇತನವನ್ನು ಸ್ಪರ್ಶಿಸುತ್ತದೆ. ಆಗ ಆತನು ಆತ್ಮದ ವಾತಾವರಣವನ್ನು ಧಾರಾಳವಾಗಿ ಉಸಿರಾಡಿಸುತ್ತಿರುತ್ತಾನೆ. 'ಆತ್ಮ'ವೆಂದು ನಾವು ಕರೆಯುವುದು ಭಗವಂತನ ಅನುಗ್ರಹವು ತಂದಿರಿಸಿದ ಈ ವಿಶ್ವವ್ಯಾಪೀ ವಾತಾವರಣವೇ ಆಗಿದೆ. ಆತ್ಮವು ವಿಶ್ವವ್ಯಾಪಿಯೂ ಅಹುದು, ವಿಶ್ವಾತೀತವೂ ಅಹುದು. ಆತ್ಮದ ಈ ವಾತವರಣದ ಒಂದಂಶವೇ ನಮ್ಮೊಳಗಿನ 'ಅಂತರಾತ್ಮ'. ಆತ್ಮದ ವಾತಾವರಣವನ್ನು ಉಸಿರಾಡಿಸುತ್ತ ಬಾಳುವವನಿಗೆ ಈ ಜೀವನ ಸಾಗರದ ಮತ್ತೊಂದು ದಡಕ್ಕೆ ಬಂದು ಹತ್ತಿದ ಅನುಭವವಾಗಿರುತ್ತದೆ ! ಹೊಸಹುಟ್ಟಿನ ಈ ಅನುಭವ ಬರಬರುತ್ತ ಗಟ್ಟಿಗೊಳ್ಳುತ್ತದೆ. ಆಗ ಆತ್ಮದ ಸ್ಪರ್ಶದಿಂದಾಗುವುದು ದಿವ್ಯಾನಂದ : ಆತ್ಮ ನಮ್ಮಿಂದ ದೂರ ಸರಿದಾಗಿನ ಯಾತನೆಯೂ ಹೇಳಲಾಸಲ್ಲ ! ಆಗ ಆತ್ಮದ ಹಸಿವು ತೀವ್ರತಮ. ಇಂಥ ಆತ್ಮಾನುಭವ ಸಾಧ್ಯವಾಗುವವರೆಗೆ ನಾವು ಜೀವನ ಸಾಗರದ ಈ ದಡದಿಂದ ಆ ದಡಕ್ಕೆ ಹೋಗಿರುವುದೇ ಇಲ್ಲ. ಆತ್ಮದಲ್ಲಿ ನಾವಿನ್ನೂ ಹೊಸ ಜನ್ಮ ತಳೆದೇ ಇಲ್ಲ ಎಂದು ಅರಿತುಕೊಳ್ಳಬೇಕು.

ಸಾಮಾನ್ಯ ಜೀವನ ನಡೆಸುವ ಬಹುಜನರು ಬಾಗಿಲು-ಕಿಟಕಿಗಳನ್ನು ಮುಚ್ಚಿರುವ ಸೆರೆಮನೆಯಲ್ಲಿ ಬಿದ್ದಿರುವ ಸೆರೆಯಾಳುಗಳೇ ಆಗಿರುತ್ತಾರೆ ! ಉಸಿರಾಡಿಸಲಾಗದ ಅವಸ್ಥೆಯದು. ಸೆರೆಮನೆಯ ಬಾಗಿಲು ತೆರೆಯುವ ಬೀಗದ ಕೈ ಅವರಲ್ಲಿಯೇ ಇದ್ದು, ಅದರ ಅರಿವೇ ಅವರಿಗಿರದು. ಇನ್ನು ಅದನ್ನು ಬಳಸುವ

ಮಾತೆಲ್ಲಿ ? ಸೆರೆಮನೆಯ ಜೀವನವೇ ಜೀವನ. ಅದೇ ತಮಗಿಷ್ಟ ಎಂದು ಮುಂತಾಗಿ ಅವರೊಳಗಿನ ಯಾವುದೋ ಒಂದು ವಿಕೃತಶಕ್ತಿ ಅವರನ್ನು ಪ್ರೇರಿಸುತ್ತಿರುತ್ತದೆ. ಸೆರೆಮನೆಯ ಕತ್ತಲೆಯನ್ನೇ ಮೆಚ್ಚುವಂತೆ, ಹೊರಗಿನ ಬೆಳಕಿನಿಂದ ದೂರವಿರುವುದೇ ಹಿತವೆಂದು ಅವರು ಮನಗಾಣುವಂತೆ ಹೇಳುತ್ತದೆ. ಎಂದಿನವರೆಗೆ ಆ ವಿಕೃತಶಕ್ತಿಗೆ ಕಿವಿಗೊಟ್ಟು, ಅಂತರಾತ್ಮದ ದನಿಗೆ ಕಿವಿಗೊಡುವುದಿಲ್ಲವೋ ಅಂದಿನವರೆಗೆ ಅವರು ಆತ್ಮದಲ್ಲಿ ಹೊಸಹುಟ್ಟು ಪಡೆದಿಲ್ಲವೆಂದೇ ಹೇಳಬೇಕು. ಶ್ರೀ ಮಾತೆಯವರ ಈ ಅಮೃತವಾಣಿಗೆ ನಾವೆಲ್ಲರೂ ಕಿವಿಗೊಡಬೇಕಲ್ಲವೆ ?

15-01-1995

# ನಮ್ಮ ಭಾಷಾ ಸಮಸ್ಯೆ

ಎಸ್.ಆರ್.ಮಳಗಿ

## 1. ಸಮಸ್ಯೆಯ ಉಲ್ಬಣ ಸ್ವರೂಪ

ಭಾರತೀಯ ಭಾಷಾ ಸಮಸ್ಯೆ ಇಂದು ಬಹು ಜಟಿಲವೆನಿಸಿದೆ. ಕಾರಣವೆಂದರೆ, ಭಾರತವು ಒಂದು ಚಿಕ್ಕ ದೇಶವಾಗಿರದೆ ಒಂದು ಉಪ ಖಂಡವೇ ಆಗಿರುವುದು. ಇಲ್ಲಿ ಇದೀಗ ಹದಿನಾಲ್ಕು ರಾಷ್ಟ್ರೀಯ ಭಾಷೆಗಳನ್ನು ನಮ್ಮ ರಾಷ್ಟ್ರದ ಸಂವಿಧಾನವು ಸ್ವೀಕರಿಸಿದ್ದು, ಈ ಭಾಷೆಗಳಿಗನುಗುಣವಾಗಿ ಮತ್ತು ಇನ್ನಿತರ ಕಾರಣಗಳಿಗಾಗಿ ಹದಿನೇಳು ರಾಜ್ಯಗಳು ನಿರ್ಮಾಣಗೊಂಡಿವೆ. ಭಾಷಾನುಗುಣ ರಾಜ್ಯರಚನೆಯ ತತ್ತ್ವವನ್ನು ಒಮ್ಮೆ ಒಪ್ಪಿಕೊಂಡ ಮೇಲೆ, ಇತರ ಕ್ಷುಲ್ಲಕ ಭಾಷೆಗಳ ಜನ ಸಮೂಹಗಳೂ ಇಂದಿಲ್ಲ ನಾಳೆ ಏನೆಲ್ಲ ಒತ್ತಾಯ ತಂದು ಇನ್ನೂ ಹೆಚ್ಚಿನ ಸಂಖ್ಯೆಯ ರಾಜ್ಯಗಳ ನಿರ್ಮಾಣಕ್ಕೋಸುಗ ಹೋರಾಡುವ ಸಂಭವ ಇಲ್ಲದಿಲ್ಲ. ಭರತ ಖಂಡದಲ್ಲಿ ಇಂತಹ ಭಾಷೆಗಳ ಸಂಖ್ಯೆ ನಾಲ್ನೂರ ಐವತ್ತಕ್ಕೂ ಮೀರಿದ್ದಾಗಿದೆಯೆಂದರೆ ಈ ಭಾಷಾ ಸಮಸ್ಯೆ ಎಷ್ಟು ಉಲ್ಬಣ ಸ್ಥಿತಿಗೆ ತಲುಪೀತೆಂಬುದನ್ನು ಊಹಿಸಬಹುದು.

## 2. ಭಾರತೀಯತೆಯ ಅಭಾವ

ನಮ್ಮ ಭಾಷಾಸಮಸ್ಯೆ ಇಷ್ಟೊಂದು ಗೊಂದಲಮಯವಾಗುವುದಕ್ಕೆ ಎರಡನೆಯ ಕಾರಣವೆಂದರೆ, ಸ್ವಾತಂತ್ರ್ಯೋತ್ತರ ಭಾರತ ಜನತೆ-ನಾವೆಲ್ಲ ಒಂದು ರಾಷ್ಟ್ರದ ಜನತೆ ಎಂಬ ಭಾವೈಕ್ಯದ ಅರಿವಿನಿಂದ ಜಾಗೃತವಾಗಿಲ್ಲ. ವಿಧ ವಿಧ ಭಾಷೆ, ನಾನಾ ಮತ -ಧರ್ಮ, ಬೇರೆ ಬೇರೆ ಪಕ್ಷ-ಪಂಗಡ, ಹಲವು ಪ್ರಕಾರದ ರೂಢಿ-ಪರಂಪರೆ, ವಿವಿಧ ಆಚಾರ-ವಿಚಾರ, ಭಿನ್ನ ಭಿನ್ನ ಪ್ರಾದೇಶಿಕತೆ, - ಇತ್ಯಾದಿ ವೈವಿಧ್ಯದಲ್ಲಿ ನಾವಿಂದು ಏಕ ಸಂಸ್ಕೃತಿ ಮತ್ತು ಏಕ ರಾಷ್ಟ್ರೀಯತೆಯ ಸಾಮರಸ್ಯವನ್ನು ಕಾಣುತ್ತಿಲ್ಲ. ಇದರಿಂದ ಭರತ ಖಂಡದ ಯಾವ ರಾಜ್ಯದವರೇ ಆಗಲಿ, ನಾವೆಲ್ಲರೂ ಮುಖ್ಯವಾಗಿ ಭಾರತೀಯರು ಎಂಬ ಭಾವ ನಮ್ಮ ಅನುಭವಕ್ಕೆ ಬರುತ್ತಿಲ್ಲ. ಈ ಕಾರಣದಿಂದಲೂ ಇಂದು ಭಾಷಾ ಸಮಸ್ಯೆ ಒಂದು ಭೂತದಂತೆ ಕಾಡುತ್ತಿದೆ.

## 3. ಜಾಗತಿಕ ಪ್ರಗತಿಗೆ ಭಾರತದ ಉಪಕೃತಿ

ಭಾಷಾನುಗುಣ ರಾಜ್ಯ ರಚಿತವಾಗಿರುವ ರಾಜ್ಯಗಳೆಲ್ಲ ಇಂದು ಬೇರೆ ಬೇರೆ ರಾಷ್ಟ್ರಗಳೇನೋ ಎಂಬಂತೆ ವರ್ತಿಸುತ್ತಿವೆ ! 1956ರಲ್ಲಿ ರಾಜ್ಯಗಳ ಪುನರ್ವಿಭಜನೆಯಾಯಿತು. ಅದರ ಪರಿಣಾಮವಾಗಿ ಹುಟ್ಟಿದ ರಾಜ್ಯಗಳು ಒಂದೊಂದು ಗಡಿಯಲ್ಲೂ ಕೆಲವು ದ್ವಿಭಾಷಾ ಪ್ರದೇಶಗಳನ್ನು ಹೊಂದಿರುವುದು ಸಹಜ. ಇದನ್ನು ತಪ್ಪಿಸಲಿಕ್ಕಾಗದು. ಬೇರೆ ಭಾಷೆಯವರೆಂದ ಮಾತ್ರಕ್ಕೆ ಅವರನ್ನು ಬೇರೆ ಜನಾಂಗದವರೆಂದು ಕಲ್ಪಿಸುವುದಕ್ಕಾದೀತೆ ? ನೆರೆಹೊರೆಯ ರಾಜ್ಯಗಳವರೆಲ್ಲರೂ ಭಾರತೀಯರೇ ಅಲ್ಲವೆ ? ಸಹ ಜೀವನದ, ಸೋದರಭಾವದ ಉದಾತ್ತ ತತ್ವಕ್ಕೆ ಭಾರತೀಯರಲ್ಲೇ ಅಭಾವವುಂಟಾದರೆ, ಜಾಗತಿಕ ರಂಗದಲ್ಲಿ ಮೊಳೆತು ಬೆಳೆಯಬೇಕೆಂಬ ಸಹಜೀವನ ತತ್ವ, ಭ್ರಾತೃ ಭಾವ, ಸಮಾನತೆಯ ದೃಷ್ಟಿ ಇವುಗಳ ಬೆಳವಣಿಗೆಗೆ ಭಾರತೀಯರಾದ ನಮ್ಮಿಂದ ವಾಸ್ತವವಾಗಿ ಯಾವ ಉಪಕೃತಿ ಸಂದೀತು?

**4. ಮೂಲಭೂತ ಸಮಸ್ಯೆಗಳ ನಿವಾರಣೆ ಮುಖ್ಯ**

ಜಾಗತಿಕ ಪ್ರಶ್ನೆಗಳ ಮಾತೇಕೆ ? ನಮ್ಮಲ್ಲಿ ಸದ್ಯ ಸಮಸ್ಯೆಗಳಿಗೇನು ಕೊರತೆಯಿದೆಯೆ? ಸ್ವಾತಂತ್ರ್ಯ ಪ್ರಾಪ್ತಿಯ ನಂತರದ ಈ ಇಪ್ಪತ್ತು ವರುಷಗಳ ಅವಧಿಯಲ್ಲಿ ನಾಲ್ಕು ಪಂಚವಾರ್ಷಿಕ ಯೋಜನೆಗಳೊಳಗಿಂದ ನಮ್ಮರಾಷ್ಟ್ರ ಹಾಯ್ದು ಬಂದಿದ್ದರೂ ಇನ್ನೂ ಆಹಾರ, ವಸತಿ, ನಿರಕ್ಷರತೆ, ರೋಗರುಜಿನ-ಇತ್ಯಾದಿ ಮೂಲಭೂತ ಸಮಸ್ಯೆಗಳ ನಿವಾರಣೆಗೆ ಕೊಡಬೇಕಾದಷ್ಟು ಲಕ್ಷ್ಯ ಪೂರೈಸದಿರುವಾಗ, ಇವುಗಳ ಮಧ್ಯೆ ಈ ಭಾಷೆಯ ಪ್ರಶ್ನೆಯೊಂದನ್ನು ಬಗೆಹರಿಯದ ಸಮಸ್ಯೆಯನ್ನಾಗಿಸಿರುವುದು ಹಾಸ್ಯಾಸ್ಪದವೇ ಎನ್ನಬೇಕು.

**5. ಪ್ರಾದೇಶಿಕ ಭಾಷೆಗೆ ಇಂಗ್ಲಿಶ್ ಭಾಷೆಯ ತೊಡಕು**

ಭಾಷೆಯ ಸಮಸ್ಯೆಯಾದರೂ ಎಂಥದು? ಭಾರತದ ಸಂವಿಧಾನದಲ್ಲಿ ಹದಿನಾಲ್ಕೂ ಭಾಷೆಗಳಿಗೆ ಸಮಾನ ಸ್ಥಾನವಿತ್ತಿದ್ದು, ಆಯಾ ರಾಜ್ಯಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗೆ ಪ್ರಥಮ ಸ್ಥಾನವಿರಬೇಕಾದುದು ಉಚಿತವೇ ಸರಿ. ಆಯಾ ರಾಜ್ಯಗಳಲ್ಲಿ ಒಳ ಆಡಳಿತಕ್ಕಾಗಿ ಮತ್ತು ಶಿಕ್ಷಣ ಮಾಧ್ಯಮಕ್ಕಾಗಿ ಆಯಾ ಪ್ರಾದೇಶಿಕ ಭಾಷೆಯನ್ನೇ ಬಳಸಬೇಕೆಂಬಲ್ಲಿ ವಿಶೇಷ ಭಿನ್ನಾಭಿಪ್ರಾಯವಿಲ್ಲ. ಈಗಾಗಲೇ ಈ ಬಗೆಗೆ ಆಯಾ ರಾಜ್ಯಗಳಲ್ಲಿ ವಿಹಿತ ಏರ್ಪಾಟುಗಳು ನಡೆದಿವೆ. ಇದಕ್ಕೂ ಅಲ್ಲಲ್ಲಿ ವಿರೋಧ ಕಂಡುಬರುತ್ತಿರುವುದು ಸೋಜಿಗವೇ ಸರಿ. ಬ್ರಿಟಿಷರ ಆಡಳಿತದಲ್ಲಿ ಇಂಗ್ಲಿಶ್ ಭಾಷೆ ಕೇಂದ್ರ ಹಾಗೂ ವಿವಿಧ ಪ್ರಾಂತಗಳ ಆಡಳಿತ ಭಾಷೆಯಾಗಿತ್ತು. ಆಳುವವರ ಅನುಕೂಲತೆಗೊಳಪಟ್ಟು ಅಂದು ಗುಲಾಮ ಜನತೆಯಾಗಿದ್ದ ನಾವು ಆಳರಸರೊಂದಿಗೆ ಹೊಂದಿಕೊಂಡು ಬಾಳಲೇ ಬೇಕಿತ್ತು. ಆದ್ದರಿಂದ ಇಂಗ್ಲಿಶ್ ಭಾಷೆಯನ್ನು ಕಲಿತುಕೊಳ್ಳುವುದು ಅಂದು ತೀರ ಅಗತ್ಯವೆನಿಸಿತು. ಆಗ ತೀರ ಅಪರಿಚಿತವೂ, ಕಠಿನವೂ ಎನಿಸಿದ್ದ ಇಂಗ್ಲಿಶ್ ಭಾಷೆಯನ್ನು ಕಷ್ಟಪಟ್ಟು ಅಭ್ಯಸಿಸಬೇಕಾಯಿತಷ್ಟೇ ಅಲ್ಲ, ಇಂಗ್ಲಿಶ್ ಸಾಹಿತ್ಯ, ಇಂಗ್ಲಿಶ್ ಜನತೆಯ ಇತಿಹಾಸ, ಇಂಗ್ಲಿಶ್ ಸಂಸ್ಕೃತಿಯ ವ್ಯಾಸಂಗ- ಇತ್ಯಾದಿಗಳನ್ನು ನಾವು ಸ್ವಸಂತೋಷದಿಂದಲೇ ರೂಢಿಸಿಕೊಳ್ಳುತ್ತ ಬಂದೆವು. ಅವುಗಳಿಗೆ ಮಾರು ಹೋದೆವು ! ಆಗ ನಮ್ಮ ತಾಯ್ನುಡಿಗಳನ್ನೂ ನಾವು ಕಡೆಗಣಿಸಿದೆವು. ಒಡೆಯರಿಂದ ಒಂದು ರೀತಿಯ ಒತ್ತಾಯದಿಂದ ಹೇರಲ್ಪಟ್ಟ ಭಾರವಾದ ಪರಕೀಯ ಭಾಷೆಯೊಂದನ್ನು ಶಾಲೆ-ಕಾಲೇಜುಗಳಲ್ಲಿ ಭಾರತದಾದ್ಯಂತ ಪಠ್ಯ ವಿಷಯವಾಗಿಸಿಕೊಂಡೆವಷ್ಟೆ ಅಲ್ಲ, ಅದನ್ನು ಉಳಿದ ವಿಷಯಗಳ ವ್ಯಾಸಂಗಕ್ಕೂ ಮಾಧ್ಯಮವನ್ನಾಗಿಸಿಕೊಂಡೆವು. ಆಗ ನಮಗೆ ಇಂಗ್ಲಿಶ್ ಭಾಷೆಯ ತೊಡಕು ಒಂದು ಸಮಸ್ಯೆ ಅನಿಸಲಿಲ್ಲ ! ಕಳೆದ ಈ ಇನ್ನೂರು ವರುಷಗಳ ಪರಕೀಯ ಆಡಳಿತದಲ್ಲಿ ಭಾರತೀಯರೆಷ್ಟು ಜನ ಇಂಗ್ಲಿಶ್ ಭಾಷೆಯನ್ನು ಕರಗತಗೊಳಿಸಿಕೊಂಡಿದ್ದಾರೆ? ನೂರರಲ್ಲಿ ಇಬ್ಬರು ಮಾತ್ರವಂತೆ ! ನೂರರಲ್ಲಿ ಇನ್ನೂ ತೊಂಭತ್ತೆಂಟರಷ್ಟು ಜನ ಕೋಟಿಗೆ ಈ ಭಾಷೆಯ ಗಂಧವಿಲ್ಲ ! ಸುಶಿಕ್ಷಿತರೆನಿಸಿದ ಈ ಇಬ್ಬರು ಪಡೆದ ಇಂಗ್ಲಿಶ್ ಭಾಷಾ ಪ್ರಭುತ್ವವಾದರೂ ಎಂಥದು ? ಆಳುವ ಒಡೆಯರೊಂದಿಗೆ ವ್ಯವಹರಿಸುವಲ್ಲಿ ಹರಕು-ಮುರುಕಾಗಿ ತಮ್ಮ ಮನೋಗತವನ್ನು ತಿಳಿಯಪಡಿಸುವಷ್ಟರ ಮಟ್ಟಿನದು ಮಾತ್ರ. ಇದರಿಂದ ಭಾರತೀಯ ಕೋಟ್ಯಂತರ ಜನ ಸಮುದಾಯದ ಬೌದ್ಧಿಕ ಹಾಗೂ ಸಾಂಸ್ಕೃತಿಕ ಬೆಳವಣಿಗೆ ಕುಂಠಿತವಾಗುತ್ತ ನಡೆದು ಕೊನೆಯಲ್ಲಿ ಸ್ಥಗಿತಗೊಂಡಿತೆಂದರೂ ತಪ್ಪಿಲ್ಲ.

## 6. ತಾಯ್ನುಡಿಯ ಮಾಧ್ಯಮ ವಿದ್ಯಾರ್ಜನೆಯ ಸಚೇತನ ತತ್ವ

ಇಂದು ಭಾರತ ಸ್ವತಂತ್ರವಾಗಿದ್ದು ವೈವಿಧ್ಯಮಯವಾದ ತನ್ನತನವನ್ನು ಅದು ಉಳಿಸಿ ಬೆಳೆಸಿಕೊಳ್ಳಬೇಕಾದುದು ಆವಶ್ಯಕ. ಇದಕ್ಕಾಗಿ ಪ್ರತಿಯೊಂದು ರಾಜ್ಯದಲ್ಲಿ ಆಡಳಿತ ಭಾಷೆ ಮತ್ತು ಶಿಕ್ಷಣ ಮಾಧ್ಯಮ ಭಾಷೆ ಎಲ್ಲರಿಗೂ ತಿಳಿಯುವ ತಾಯ್ನುಡಿಯೇ ಆಗಬೇಕೆಂಬ ಆಸೆ ಸಹಜ. ಭಾರತಕ್ಕೆ ರಾಷ್ಟ್ರೀಯ ಭಾವನೆಯ ಕಣ್ಣು ಕೊಟ್ಟು ರಾಜಕೀಯ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟ ಮಹಾತ್ಮಗಾಂಧಿಯವರಂತಹ ನೇತಾರರೂ, ಜಾಗತಿಕ ಹಾಗೂ ಭಾರತೀಯ ಶಿಕ್ಷಣ ತಜ್ಞರೂ ತಾಯ್ನುಡಿಯ ಮಾಧ್ಯಮವೇ ವಿದ್ಯಾರ್ಜನೆಯ ಸಚೇತನ ತತ್ವವೆಂದು ಹೇಳುತ್ತ ಬಂದಿದ್ದಾರೆ. ಅದನ್ನೀಗ ಪ್ರಾಥಮಿಕ ಮಟ್ಟದಿಂದ ವಿಶ್ವವಿದ್ಯಾನಿಲಯದ ಪದವೀ ಪರೀಕ್ಷೆಗಳ ಮಟ್ಟದವರೆಗೆ ರೂಢಿಸಿಕೊಳ್ಳುವ ಪ್ರಯತ್ನಗಳು ನಡೆಯಲೇ ಬೇಕು. ಈ ಇಪ್ಪತ್ತು ವರುಷಗಳಲ್ಲಿ ಕ್ರಮ ಕ್ರಮವಾಗಿ ಶಾಸ್ತ್ರೀಯ ದೃಷ್ಟಿಯಿಂದ ಇಂತಹ ಪ್ರಯತ್ನಗಳು ನಡೆಯದಿರುವುದಕ್ಕೆ ನಮ್ಮಲ್ಲಿ ಭಾಷೆಯ ಬಗೆಗೆ ನಿಚ್ಚಳ ದೃಷ್ಟಿಯಿಲ್ಲದಿರುವುದೇ ಮೂಲ ಕಾರಣವಾಗಿದೆ. ಶುದ್ಧ ತಾತ್ವಿಕ ಹಾಗೂ ಶೈಕ್ಷಣಿಕ ದೃಷ್ಟಿಯೊಂದೇ ಇಂತಹ ಪ್ರಯತ್ನಗಳಲ್ಲಿ ಮುಖ್ಯ. ಇನ್ನಿತರ ರಾಜಕಾರಣ ದೃಷ್ಟಿಗಳು ಶೈಕ್ಷಣಿಕ ರಂಗಗಳಲ್ಲಿ ಗೊಂದಲವುಂಟು ಮಾಡಿರುವುದರಿಂದ ನಮ್ಮ ಜನತೆಗೆ ದಾರಿಕಾಣದಂತಾಗಿದೆ. ಭಾಷೆಯ ಉದ್ದೇಶಗಳು ಮುಖ್ಯವಾಗಿ ಎರಡು: ಒಂದು - ಜ್ಞಾನ ಗ್ರಹಣ (Comprehension), ಎರಡು ಗ್ರಹಿಸಿದ ಜ್ಞಾನವನ್ನು ನಿಸ್ಸಂದಿಗ್ಧವಾಗಿ ತಿಳಿಯಪಡಿಸುವುದು (Expression). ಇವೆರಡೂ ಉದ್ದೇಶಗಳೂ ತಾಯ್ನುಡಿಯಿಂದ ಮಾತ್ರ ತೃಪ್ತಿಕರವಾಗಿ ಸಾಧ್ಯ ಎಂಬ ತತ್ವ ಶಿಕ್ಷಣ ತಜ್ಞರಿಗೆ ಸಮ್ಮತವಾಗಿದೆ.

## 7. ಪ್ರಾದೇಶಿಕ ಭಾಷೆಯೇ ಆಡಳಿತ ಹಾಗೂ ಶಿಕ್ಷಣದ ಮಾಧ್ಯಮ

ತಾಯ್ನುಡಿಯೇ ಒಂದೊಂದು ರಾಜ್ಯದ ಬಹುಸಂಖ್ಯೆಯ ಜನತೆಯ ನುಡಿಯಾಗಿರುವುದರಿಂದ ಒಂದೊಂದು ರಾಜ್ಯದ ಪ್ರಾದೇಶಿಕ ಭಾಷೆಯೇ ಆಡಳಿತ ಹಾಗೂ ಶಿಕ್ಷಣ ಮಾಧ್ಯಮವಾಗುವುದು ಕ್ರಮ ಪ್ರಾಪ್ತ. ಒಂದೊಂದು ರಾಜ್ಯದಲ್ಲೂ ಭಾಷಾ ದೃಷ್ಟಿಯಿಂದ ಅಲ್ಪಸಂಖ್ಯಾತರೆನಿಸುವವರು-ಮನೆ ಮಾತು ತಂತಮ್ಮತಾಯ್ನುಡಿಯೇ ಆಗಿದ್ದರೂ-ಸಾಮಾಜಿಕ ವ್ಯವಹಾರ ಮತ್ತು ಶಿಕ್ಷಣ ಮಾಧ್ಯಮಗಳಿಗಾಗಿ ಪ್ರಾದೇಶಿಕ ಭಾಷೆಯನ್ನೇ ಕಲಿತುಕೊಳ್ಳಬೇಕಾದುದು ಅನಿವಾರ್ಯ. ಈ ಬಗೆಗೆ ಭಾಷಾ ಅಲ್ಪ ಸಂಖ್ಯಾತರು ಭಿನ್ನಾಭಿಪ್ರಾಯ ತಳೆಯುವುದೂ ದ್ವಿಧಾವೃತ್ತಿಯಿಂದ ನಡೆದುಕೊಳ್ಳುವುದೂ ರಾಷ್ಟ್ರದ ಒಟ್ಟಿನ ಸಾಮರಸ್ಯಕ್ಕೆ ಬಾಧಕಪ್ರಾಯವಾಗಿದೆ.

## 8. ಕನ್ನಡ ಭಾಷೆ ಸತ್ವಯುತ

ಕನ್ನಡ ನಾಡಿನ ಪ್ರಾದೇಶಿಕ ಭಾಷೆಯಾಗಿರುವ ಕನ್ನಡವು ಸುಮಾರು ಎರಡು ಸಾವಿರ ವರುಷಗಳ ಬೆಳವಣಿಗೆಯಿಂದಾಗಿ ಸತ್ವಶಾಲಿಯೂ ಶ್ರೀಮಂತವೂ ಆದ ಭಾಷೆ. ಹಳಗನ್ನಡ, ನಡುಗನ್ನಡ, ಹೊಸಗನ್ನಡ ಇತ್ಯಾದಿ ಅವಸ್ಥೆಗಳಲ್ಲಿ ಪಳಗಿ ಬೆಳೆಯುತ್ತಿರುವ ಕನ್ನಡ ಸಾಹಿತ್ಯದ ವೈವಿಧ್ಯ-ವೈಪುಲ್ಯಗಳೇ ಇದಕ್ಕೆ ಸಾಕ್ಷಿ. ಕನ್ನಡ

ಭಾಷೆಗೆ ಇಂದಿನ ನೂತನ ವೈಜ್ಞಾನಿಕ ವಿಷಯಗಳ ಪ್ರತಿಪಾದನೆಗೆ ಶಕ್ತಿ ಸಾಲದು ಎಂಬ ವಾದವನ್ನು ಮುಂದೊಡ್ಡಿ ಅದಕ್ಕೆ ವಿಶ್ವವಿದ್ಯಾಲಯದ ಶಿಕ್ಷಣ ಮಾಧ್ಯಮದ ಸ್ಥಾನ ಸಲ್ಲದೆಂದು ಹೇಳುವುದು ಸಯುಕ್ತಿಕವಾಗಿಲ್ಲ. ಭಾರತೀಯ ಸಾಹಿತ್ಯ, ಸಂಸ್ಕೃತಿ, ಶಾಸ್ತ್ರ, ಪುರಾಣ, ವೇದ-ವೇದಾಂತ ತತ್ವಗಳ ಪ್ರತಿಪಾದನೆ-ನಿರೂಪಣೆಗಳಿಗಾಗಿ ದ್ರಾವಿಡ ಭಾಷೆಗಳ ಸಾಕು ತಾಯಿಯೂ, ಭಾರತೀಯ ಸಂಸ್ಕೃತಿ ವಾಹಕವೂ ಎನಿಸಿರುವ ಸಂಸ್ಕೃತ ಭಾಷೆಯನ್ನು ಕನ್ನಡವು ಮೈಗೂಡಿಸಿಕೊಂಡು ಅನರ್ಘ್ಯ ಕೃತಿ ರತ್ನಗಳನ್ನು ರಚಿಸಿಲ್ಲವೆ? ಹಾಗೆಯೇ ಇಂದಿನ ನೂತನ ವಿಜ್ಞಾನ ವಾಹಕವೆನಿಸಿದ ಇಂಗ್ಲಿಶ್ ಪರಿಭಾಷೆಯನ್ನೂ ಕನ್ನಡ ಮತ್ತು ಇನ್ನಿತರ ಎಲ್ಲ ಪ್ರಬುದ್ಧ ಪ್ರಾದೇಶಿಕ ಭಾಷೆಗಳು ಸಮುಚಿತ ರೀತಿಯಲ್ಲಿ ಬಳಸಿಕೊಳ್ಳುವುದು ಸಾಧ್ಯವಿದೆ. ಈ ನಿಟ್ಟಿನಲ್ಲಿ ಅಖಿಲ ಭಾರತೀಯ ತಾಂತ್ರಿಕ ಹಾಗೂ ವೈಜ್ಞಾನಿಕ ಪರಿಭಾಷಾಕೋಶವೊಂದರ ಸಿದ್ಧತೆಯ ಏರ್ಪಾಟು ಈಗಾಗಲೇ ಕೇಂದ್ರ ಸರಕಾರದ ಯೋಜನೆಗಳಲ್ಲಿದೆಯೆಂದು ತಿಳಿದುಬರುತ್ತಿದೆ. ಅಂಥದೊಂದು ಪಾರಿಭಾಷಿಕ ಶಬ್ದಕೋಶ ಪ್ರಚಲಿತವಾಗುವ ಮುನ್ನ ಆಂಗ್ಲ ಪರಿಭಾಷೆಗೆ ಪ್ರತಿಯಾಗಿ ಕ್ರಮಬದ್ಧ ರೀತಿಯಲ್ಲಿ ತದ್ಭವೀಕರಿಸಿಯೋ, ಪ್ರತಿ ಶಬ್ದಗಳನ್ನು ರಚಿಸಿಯೋ ಇಲ್ಲವೆ ಅನಾಮತ್ತಾಗಿ ಮೂಲ ಆಂಗ್ಲ ಪದಗಳನ್ನೇ ತಾತ್ಪೂರ್ತಿಕ ಎರವಲಾಗಿ ಸ್ವೀಕರಿಸಿಯೋ ಕನ್ನಡ ಹಾಗೂ ಇತರ ಪ್ರಾದೇಶಿಕ ಭಾಷಾ ಮಾಧ್ಯಮಗಳಲ್ಲಿ ರೂಢಿಸಿಕೊಳ್ಳುವುದು ಸಾಧ್ಯವಿದೆ. ಶಿಕ್ಷಕರು, ಶಾಸ್ತ್ರವೇತ್ತರು, ಸಾಹಿತಿಗಳು, ತಜ್ಞ ಬರೆಹಗಾರರು ಮನಸ್ಸು ಮಾಡಿದಲ್ಲಿ ಮತ್ತು ನಮ್ಮ ಜನತಾ ಸರಕಾರಗಳು ಕಾನೂನುಬದ್ಧ ರೀತಿಯಲ್ಲಿ ಪ್ರೋತ್ಸಾಹ ನೀಡಿದಲ್ಲಿ ಅಲ್ಪ ಕಾಲಾವಧಿಯಲ್ಲಿಯೇ ವೈಜ್ಞಾನಿಕ ಪಠ್ಯ ಪುಸ್ತಕಗಳ ಕೊರತೆ ಬೇಗನೆ ನೀಗದಿರದು. ಅಂತೆಯೇ ವಿಜ್ಞಾನ ವಿಷಯಗಳನ್ನು ಕನ್ನಡದಲ್ಲಿ ಪಾಠ ಹೇಳಬಲ್ಲ ಶಿಕ್ಷಕರ ಕೊರತೆಯೂ ಉಂಟಾಗಲಾರದು. ಬೇಡಿಕೆಯಿದ್ದಂತೆ ಪೂರೈಕೆ. ಕರ್ನಾಟಕದ ಕೆಲ ಭಾಗಗಳಲ್ಲಿ ಕಳೆದ ಕಾಲು ಶತಮಾನದಿಂದಲೇ ಮಾಧ್ಯಮಿಕ ಮಟ್ಟದ ಶಿಕ್ಷಣವೆಲ್ಲ ಕನ್ನಡ ಮಾಧ್ಯಮದಲ್ಲಿಯೇ ನಡೆಯುತ್ತ ಬಂದಿದೆ. ಇದರ ಪರಿಣಾಮವಾಗಿ ಕನ್ನಡ ವೈಜ್ಞಾನಿಕ ಪರಿಭಾಷಾ ಸಂಗ್ರಹವೂ ಕೆಲಮಟ್ಟಿಗೆ ಅಭಿವೃದ್ಧಿ ಹೊಂದಿದೆ. ಹಲವಾರು ವೈಜ್ಞಾನಿಕ ಪರಿಭಾಷಾ ಪಠ್ಯಪುಸ್ತಕಗಳು ರಚಿತವಾಗಿವೆ. ಆದರೆ ಈ ನಿಟ್ಟಿನಲ್ಲಿ ಪ್ರಗತಿ ಇನ್ನೂ ಆಗಬೇಕಾಗಿದೆ. ಮಾಧ್ಯಮಿಕ ಶಿಕ್ಷಣವನ್ನು ಕನ್ನಡ ಮಾಧ್ಯಮದಲ್ಲಿ ಪೂರೈಸಿಕೊಂಡ ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾಲಯ ಶಿಕ್ಷಣ ಮಾಧ್ಯಮವು ಇನ್ನೂ ಇಂಗ್ಲಿಶ್ ಭಾಷೆಯೇ ಆಗಿರುವುದು ಅಸ್ವಾಭಾವಿಕ. ಇದರಿಂದ ಮಾಧ್ಯಮಿಕ ಶಿಕ್ಷಣದ ಕೊನೆಯ ಪರೀಕ್ಷೆ (ಎಸ್.ಎಸ್.ಎಲ್.ಸಿ.)ಯಲ್ಲಿ ಪ್ರಥಮ ತರಗತಿಯಲ್ಲಿ ತೇರ್ಗಡೆಯಾದ ಎಷ್ಟೋ ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾಲಯದ ಪರೀಕ್ಷೆಗಳಲ್ಲಿ ದೊರೆಯಬೇಕಾದಷ್ಟು ಅಂಕಗಳು ದೊರೆಯದೆ, ಹಲವು ಸಲ ಅವರ ಉಚ್ಚ ಮಟ್ಟದ ವಿದ್ಯಾಭ್ಯಾಸ ಯಶಸ್ವಿಯಾಗದಂತಹ ಉದಾಹರಣೆಗಳೂ ಇವೆ. ಇತ್ತೀಚೆಗೆ ವಿಶ್ವವಿದ್ಯಾಲಯದ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವ ವಿದ್ಯಾರ್ಥಿಗಳ ಪ್ರತಿಶತ ಪ್ರಮಾಣ ಹಾಸ್ಯಾಸ್ಪದವೆನಿಸುವಷ್ಟು ಕೆಳಮಟ್ಟಕ್ಕಿಳಿದಿದೆ. ಇದೀಗ ಕನ್ನಡ ನಾಡಿನ ವಿಶ್ವವಿದ್ಯಾಲಯಗಳೆಲ್ಲವೂ ಕನ್ನಡವನ್ನೇ ವಿಶ್ವವಿದ್ಯಾಲಯದ ಶಿಕ್ಷಣ ಹಾಗೂ ಪರೀಕ್ಷೆಯ ಮಾಧ್ಯಮವಾಗಿಸುವ ಕ್ರಮಬದ್ಧ ಯೋಜನೆ ನಡೆಸಿದುದು ಸೂಕ್ತವಾಗಿದೆ.

## 9. ಸಂಪರ್ಕ ಭಾಷೆಗಳ ನೆರವು

ನಮ್ಮ ರಾಷ್ಟ್ರದ ವಿದ್ಯಾರ್ಥಿಗಳು ಪ್ರಾದೇಶಿಕ ಭಾಷಾ ಮಾಧ್ಯಮದಲ್ಲಿಯೇ ಶಿಕ್ಷಣ ಪಡೆಯುತ್ತ ಹೋದಲ್ಲಿ, ಭಾರತದ ಇತರ ರಾಜ್ಯಗಳಿಗೆ ಮತ್ತು ವಿದೇಶಗಳಿಗೆ ಉಚ್ಚ ಶಿಕ್ಷಣಕ್ಕಾಗಿ ಹೋಗಿಬರುವ, ಕೇಂದ್ರ ಸರಕಾರದ ಸೇವಾ ಸಿಬ್ಬಂದಿಗಳಲ್ಲಿ ಪ್ರವೇಶ ದೊರಕಿಸುವ ಸಾಧ್ಯತೆ ಕಡಿಮೆಯಾಗುವುದೆಂಬ ವಾದವೂ ಇದೆ. ಇದರಲ್ಲೂ ಅಷ್ಟೊಂದು ಹುರುಳಿಲ್ಲ. ಯಾಕೆಂದರೆ, ಅಖಿಲ ಭಾರತ ಸಂಪರ್ಕ ಭಾಷೆಯಾಗಲಿರುವ ಹಿಂದೀ ಒಂದೆಡೆ, ಅಂತಾರಾಷ್ಟ್ರೀಯ ಸಂಪರ್ಕ ಭಾಷೆಯಾಗಿರುವ ಇಂಗ್ಲಿಶ್ ಇನ್ನೊಂದೆಡೆ ನಮ್ಮ ವಿದ್ಯಾರ್ಥಿಗಳ ನೆರವಿಗೆ ಇದ್ದೇ ಇವೆ. ಈ ಎರಡು ಸಂಪರ್ಕ ಭಾಷೆಗಳ ಬಗೆಗೆ ನಿಚ್ಚಳ ಕಲ್ಪನೆಯಿರುವುದು ಆವಶ್ಯಕ.

## 10. ಅಖಿಲ ಭಾರತದ ಸಂಪರ್ಕ ಭಾಷೆ-ಹಿಂದಿ

ರಾಜ್ಯ-ರಾಜ್ಯಗಳ ಹಾಗೂ ಕೇಂದ್ರ-ರಾಜ್ಯಗಳ ನಡುವೆ ಆಡಳಿತ ವ್ಯವಹಾರಕ್ಕಾಗಿ ಅಖಿಲ ಭಾರತ ಸಂಪರ್ಕ ಭಾಷೆ ಹಿಂದೀ ಇರಬೇಕೆಂಬ ಅಂಶ ಭಾರತ ಸಂವಿಧಾನದಲ್ಲಿ ಸೇರ್ಪಡೆಯಾಗಿದೆ. ಇದು ಯೋಗ್ಯವೇ ಸರಿ. ಯಾಕೆಂದರೆ, ಭಾರತದ ಹದಿನಾಲ್ಕು ರಾಷ್ಟ್ರೀಯ ಭಾಷೆಗಳಲ್ಲಿ ಹಿಂದೀ ಮಾತನಾಡುವ ಜನಸಂಖ್ಯೆಯೇ ಎಲ್ಲಕ್ಕೂ ದೊಡ್ಡದು. ಭಾರತದ ಒಟ್ಟು ಜನಸಂಖ್ಯೆಯ ಅರ್ಧದಷ್ಟು ಜನಕ್ಕೆ ಹಿಂದೀ ಪರಿಚಿತ ಭಾಷೆ. ಉತ್ತರ ಭಾರತದ ಭಾಷೆಗಳೆಲ್ಲ ಸಂಸ್ಕೃತ-ಪ್ರಾಕೃತ ಜನ್ಯ ಭಾಷೆಗಳೇ ಆಗಿರುವುದರಿಂದ ಉತ್ತರ ಭಾರತೀಯರಿಗೆ ಹಿಂದೀ ಕಲಿಯಲು ಬಹು ಸುಲಭ. ಇನ್ನು ದಕ್ಷಿಣ ಭಾರತದ ಭಾಷೆಗಳೆಲ್ಲವೂ ದ್ರಾವಿಡ ಗುಂಪಿಗೆ ಸೇರಿದ್ದು ದಕ್ಷಿಣ ಭಾರತೀಯರಿಗೆ ಹಿಂದೀ ಕಲಿಯುವುದು ಅಷ್ಟು ಸುಲಭವಲ್ಲ ಎಂಬುದನ್ನು ಒಪ್ಪಬೇಕು. ಆದರೂ ದಕ್ಷಿಣ ಭಾರತೀಯರಿಗೆ ಹಿಂದಿ ಕಲಿಯುವುದು ಅಸಾಧ್ಯವೇನಲ್ಲ ಎಂಬುದು ಅನುಭವದ ಮಾತಾಗಿದೆ. ಇಂದು ಹಿಂದೀ ಅನೇಕ ಕಾರಣಗಳಿಂದ ಭಾರತದ ತುಂಬೆಲ್ಲಾ ಚಿರಪರಿಚಿತ ಭಾಷೆ ಎನಿಸುವಷ್ಟು ಪ್ರಚಾರವಾಗುತ್ತಲೇ ಇದೆ. ಭಾರತದ ಆದ್ಯಂತ-ವಾಸಿಸುತ್ತಿದ್ದ ನಮ್ಮ ಮುಸಲ್ಮಾನ ಬಂಧುಗಳ ಭಾಷೆಯಾಗಿರುವ ಉರ್ದು ಹಿಂದೀ ಭಾಷೆಗೆ ತೀರ ಹತ್ತಿರ ಸಂಬಂಧವುಳ್ಳದ್ದು. ಹಿಂದೀ ಮಾತನಾಡುವವರಿಗೆ ಉರ್ದು ತಿಳಿಯದಿಲ್ಲ. ಉರ್ದು ಮಾತನಾಡುವವರಿಗೆ ಹಿಂದೀ ತಿಳಿದುಕೊಳ್ಳಲು ಕಷ್ಟವೆನಿಸದು. ಹಿಂದೀ-ಉರ್ದು ಮಾತುಗಳು ಒಂದಿಲ್ಲೊಂದು ಕಾರಣದಿಂದ ದಕ್ಷಿಣ ಭಾರತೀಯರ ಕಿವಿಗೆ ಪ್ರತಿನಿತ್ಯ ಬೀಳುತ್ತಲೇ ಇರುತ್ತವೆ. ಆದ ಕಾರಣ ಹಿಂದೀ ಭಾಷೆ ದಕ್ಷಿಣ ಭಾರತೀಯರಿಗೆ ಕಲಿತುಕೊಳ್ಳಲು ಅಸಾಧ್ಯವೆನಿಸುಷ್ಟು ಅಪರಿಚಿತವೇನಲ್ಲ. ಅಲ್ಲದೆ, ಸ್ವಾತಂತ್ರ್ಯ ಪೂರ್ವದ ಮೂರು ನಾಲ್ಕು ದಶಕಗಳಿಂದಲೇ ಮಹಾತ್ಮರ ದೂರದರ್ಶೀ ಆಂದೋಲನದ ಪರಿಣಾಮವಾಗಿ ಭಾರತತಾದ್ಯಂತವಾಗಿ ಹಿಂದೀ ಭಾಷೆ ಪ್ರಚಾರಗೊಳ್ಳುತ್ತಲೇ ಬಂದಿದೆ. ಅದರಲ್ಲೂ ತೆಲುಗು, ತಮಿಳು, ಮಲೆಯಾಳಂ, ಕನ್ನಡ, ಮೊದಲಾದ ದ್ರಾವಿಡ ಭಾಷಾ ಪ್ರದೇಶಗಳಲ್ಲಿ ಹಿಂದೀ ಭಾಷಾ ಪ್ರಚಾರ ಕೇಂದ್ರಗಳು ವ್ಯವಸ್ಥಿತವಾಗಿ ಹಿಂದೀ ಅಧ್ಯಾಪನ ಕಾರ್ಯಗಳನ್ನು ಎಂದಿನಿಂದಲೂ ನಡೆಸುತ್ತಲಿವೆ. ಇದರ ಫಲವಾಗಿ ದಕ್ಷಿಣ ಭಾರತೀಯರೆನಿಸುವ ಹಲವರಲ್ಲಿ ಕಂಡು ಬರುತ್ತಿರುವ ಹಿಂದೀ ಭಾಷಾ ಪ್ರಭುತ್ವ ಹಿಂದೀ ಮನೆ ಮಾತಾಗಿರುವ ಉತ್ತರ ಭಾರತೀಯರನ್ನು

ಬೆರಗುಗೊಳಿಸುವಂತಿದೆ ! ಆದ್ದರಿಂದ ಹಿಂದೀ ಭಾಷೆ ಭಾರತದ ಸಂಪರ್ಕ ಭಾಷೆಯಾಗಲೂ ಸರ್ವಥಾ ಅರ್ಹವಾಗಿದೆ.

**11. ಇಂಗ್ಲಿಶ್ ಜೊತೆಗೆ ಹಿಂದಿ - ತಾತ್ಪೂರ್ತಿಕ ವ್ಯವಸ್ಥೆ**

ಆದರೆ ಈಗಲೇ ಹಿಂದಿಯನ್ನು ಇಂಗ್ಲಿಶ್ ಭಾಷೆಯ ಸ್ಥಾನದಲ್ಲಿ ಸಂಪರ್ಕ ಭಾಷೆಯೆಂದು ಚಲಾವಣೆಯಲ್ಲಿ ತರಲು ಹಲವರ ವಿರೋಧವಿದೆ. ಇದಕ್ಕೆ ಸೂಕ್ತ ಕಾರಣಗಳಿಲ್ಲದಿಲ್ಲ. ಭಾರತದ ಎಲ್ಲ ರಾಜ್ಯಗಳಲ್ಲೂ-ಅದರಲ್ಲೂ ವಿಶೇಷವಾಗಿ ದಕ್ಷಿಣ ಭಾರತದ ಎಲ್ಲೆಡೆಗಳಲ್ಲೂ ಹಿಂದೀ ಭಾಷೆ ವಿಶೇಷವಾಗಿ ಪ್ರಚಾರಗೊಂಡು ಜನತೆಗೆಲ್ಲ ಅರ್ಥವಾಗುಷ್ಟರ ಮಟ್ಟಿಗೆ ಅದು ಜನ ಸಂಪರ್ಕವನ್ನು ನಿಕಟವಾಗಿ ಪಡೆಯುವುದು ಆವಶ್ಯಕ. ಅಲ್ಲಿಯವರೆಗೆ ಹಿಂದೀ ಭಾಷೆಯನ್ನು ಭಾರತದ ಏಕೈಕ ಸಂಪರ್ಕ ಭಾಷೆಯೆಂದು ದಕ್ಷಿಣ ಭಾರತೀಯರ ಮೇಲೆ ಒತ್ತಾಯದಿಂದ ಹೇರುವುದು ಸಮಂಜಸವಲ್ಲ. ದಕ್ಷಿಣ ಭಾರತೀಯರೆಲ್ಲರೂ ಸ್ವಸಂತೋಷದಿಂದ ಹಿಂದೀ ಭಾಷೆಯನ್ನು ಸಂಪರ್ಕ ಭಾಷೆಯೆಂದು ಸ್ವೀಕರಿಸಲೊಪ್ಪುವವರೆಗೆ ಈ ಬಗೆಗೆ ದುಡುಕು ಕೂಡದೆಂದು ಹಿಂದೊಮ್ಮೆ ದಿ॥ ಜವಾಹರಲಾಲ್ ನೆಹ್ರೂ ಅವರು ಹೇಳಿದ ಮಾತು ಯುಕ್ತಿ ಯುಕ್ತವೂ, ದೂರದೃಷ್ಟಿಯದೂ ಆಗಿದೆ. ಅಲ್ಲಿಯವರೆಗೆ ಸದ್ಯದ ಸಂಪರ್ಕ ಭಾಷೆಯಾಗಿರುವ ಇಂಗ್ಲಿಷ್ ಭಾಷೆಯೊಂದಿಗೆ ಹಿಂದಿಯನ್ನು ರಾಜ್ಯ-ರಾಜ್ಯಗಳ ಹಾಗೂ ಕೇಂದ್ರ-ರಾಜ್ಯಗಳ ಆಡಳಿತ ವ್ಯವಹಾರಗಳಲ್ಲಿ ರೂಢಿಸಿಕೊಂಡು ಹೋಗುವುದು ವ್ಯಾವಹಾರಿಕ. ದಕ್ಷಿಣ ಭಾರತದ ಕೆಲವು ರಾಜ್ಯಗಳಲ್ಲಿ ಹಿಂದೀ ವಿರೋಧವು ಸ್ವಾಭಾವಿಕ ಸ್ವರೂಪ ತಳೆದಿರುವುದು ಭಾರತ ರಾಷ್ಟ್ರದ ಭಾವೈಕ್ಯದ ದೃಷ್ಟಿಯಿಂದ ಒಳ್ಳೆಯ ಲಕ್ಷಣವಲ್ಲ. ದಕ್ಷಿಣದವರ ಈ ಹಿಂದೀ ವಿರೋಧವು ಹಿಂದೀ ಮನೆ ಮಾತಾಗಿರುವ ಉತ್ತರದವರ ದುಡುಕುತನದ ಅತಿರೇಕಕ್ಕೊಂದು ಉತ್ತರವಿದ್ದಂತೆಯೂ ಇದೆ. ದಕ್ಷಿಣದವರೇ ಆಗಲಿ, ಉತ್ತರದವರೇ ಆಗಲೀ-ಎಲ್ಲರೂ ಭಾರತೀಯರೇ ಅಲ್ಲವೆ? ಆದ ಕಾರಣ, ಸದ್ಯ ತಾತ್ಪೂರ್ತಿಕವಾಗಿ ಹಿಂದೀ ಮತ್ತು ಇಂಗ್ಲಿಶ್ ಭಾಷೆಗಳೆರಡೂ ಕೆಲ ಕಾಲ ಕೂಡಿಯೇ ಸಂಪರ್ಕ ಭಾಷೆಗಳಾಗಿ ಚಲಾವಣೆಯಲ್ಲಿರುವುದರಲ್ಲಿ ದೇಶದ ಹಿತವಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಕ್ರಮಗಳಲ್ಲಿ ಹಿಂದೀ ಮತ್ತು ಇಂಗ್ಲಿಶ್ ಭಾಷೆಗಳನ್ನು ವ್ಯಾವಹಾರಿಕ ದೃಷ್ಟಿಯಿಂದ ತೃಪ್ತಿಕರವಾಗಿ ವ್ಯಾಸಂಗ ನಡೆಸುವಂತೆ ತಕ್ಕ ಏರ್ಪಾಟುಗಳನ್ನು ಒದಗಿಸಿಕೊಡುವುದು ಆವಶ್ಯಕ. ಈ ಎರಡೂ ಭಾಷೆಗಳ ವ್ಯಾವಹಾರಿಕ ಜ್ಞಾನವನ್ನು ಪ್ರತಿಯೊಬ್ಬ ದಕ್ಷಿಣ ಭಾರತೀಯನು ಅತ್ಯಗತ್ಯವಾಗಿ ಪಡೆಯಲೇಬೇಕೆಂಬ ನಿಯಮವಿರಬೇಕು. ಇಂದಿನ ಶಿಕ್ಷಣ ಕ್ರಮ (curriculum) ಗಳಲ್ಲಿ ಈ ಒಂದಂಶವೂ ಸೇರ್ಪಡೆಯಾಗಬೇಕು.

**12. ತ್ರಿಭಾಷಾ ಸೂತ್ರ**

ತ್ರಿಭಾಷಾ ಸೂತ್ರದ ಮೂಲೋದ್ದೇಶವು ಇದೇ ಆಗಿದೆ: ಪ್ರತಿಯೊಂದು ರಾಜ್ಯದಲ್ಲಿ ಅಲ್ಲಿಯ ಪ್ರಾದೇಶಿಕ ಭಾಷೆಗೆ ಎಲ್ಲಾ ಕ್ಷೇತ್ರಗಳಲ್ಲಿ ಪ್ರಥಮ ಸ್ಥಾನವಿರಬೇಕು. ಅನಂತರದ ಸ್ಥಾನ ಸಂಪರ್ಕ ಭಾಷೆಯಾಗಲಿರುವ ಹಿಂದೀ ಭಾಷೆಗೆ. ಮೂರನೆಯ ಸ್ಥಾನ, ಅಂತಾರಾಷ್ಟ್ರೀಯ ಸಂಪರ್ಕ ಭಾಷೆ ಎನಿಸಿರುವ ಇಂಗ್ಲಿಶ್ ಭಾಷೆಗೆ. ಇನ್ನು ಹಿಂದೀ ಪ್ರಾದೇಶಿಕ ಭಾಷೆಯಾಗಿರುವ ಉತ್ತರ ಭಾರತದ ರಾಜ್ಯಗಳಲ್ಲಿ ಭಾರತದ ಭಾವೈಕ್ಯ ದೃಷ್ಟಿಯಿಂದ

ದಕ್ಷಿಣದ ಯಾವೊಂದು ಭಾಷೆಯ ವ್ಯಾಸಂಗದ ಏರ್ಪಾಟು ಅಲ್ಲಿಯ ಶಿಕ್ಷಣ ಕ್ರಮದಲ್ಲಿರಬೇಕಾದುದು ತ್ರಿಭಾಷಸೂತ್ರದ ಉದ್ದೇಶ ಸಾಧನೆಗೆ ಪೋಷಕವಾಗಿದೆ. ಈ ತ್ರಿಭಾಷಾ ಸೂತ್ರವನ್ನು ಎಲ್ಲಾ ರಾಜ್ಯಗಳವರೂ ಒಪ್ಪಿಕೊಂಡು ಭಾರತ ರಾಷ್ಟ್ರದ ಸರ್ವಾಂಗೀಣ ಪ್ರಗತಿ ಸಾಧಿಸುವ ಗುರಿ ನಮಗಿರಬೇಡವೆ? ಈ ತ್ರಿಭಾಷಾ ಸೂತ್ರದ ಪ್ರಾಮಾಣಿಕ ಅನುಸರಣೆಯಿಂದ ಅತ್ಯಲ್ಪ ಕಾಲಾವಧಿಯಲ್ಲಿಯೇ ಇಡಿಯ ಭಾರತದ ಜನತೆ ಈ ಭಾಷಾ ಸಮಸ್ಯೆಯ ತೊಡಕಿನಿಂದ ಮುಕ್ತವಾಗುವ ಸಾಧ್ಯತೆ ಇದೆ. ಮತ್ತು ತಾತ್ಪೂರ್ತಿಕ ವ್ಯವಸ್ಥೆಯ ಕಾಲಾವಧಿಯಲ್ಲಿ ಹಿಂದೀಭಾಷೆ ಇಂಗ್ಲಿಶ್ ಭಾಷೆಯಷ್ಟೇ ಸಮರ್ಥ ಸಂಪರ್ಕ ಭಾಷೆಯಾಗುವಂತೆ ಅದರ ಸರ್ವಾಂಗೀಣ ಅಭಿವೃದ್ಧಿಗೆ ತಕ್ಕ ಯೋಜನೆಗಳನ್ನು ಹೂಡಿ ಅವುಗಳಿಗೆ ಅನುಗುಣವಾಗಿ ಕಾರ್ಯ ಪ್ರವೃತ್ತರಾಗುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯ.

### 13. ಕನ್ನಡ-ಹಿಂದಿ ಪರಸ್ಪರ ಪೋಷಣೆ

ಹಿಂದೀ ಸಂಪರ್ಕಭಾಷೆಯಾದಲ್ಲಿ ಅದರ ಪ್ರಾಬಲ್ಯ ಹೆಚ್ಚಿ ದಕ್ಷಿಣ ಭಾರತದ ಇತರ ಭಾಷೆಗಳ ಬೆಳವಣಿಗೆ ಕುಗ್ಗುವುದೆಂಬ ವಾದ ಹುಸಿ ಹೆದರಿಕೆಯದು. ಪ್ರಾದೇಶಿಕ ಭಾಷೆಗೆ ಪ್ರತಿಯೊಂದು ರಾಜ್ಯದಲ್ಲಿ ಒಳ ಆಡಳಿತ ಹಾಗೂ ಶಿಕ್ಷಣ ಮಾಧ್ಯಮದ ಸ್ಥಾನಮಾನಗಳು ಅಬಾಧಿತವಾಗಿ ಇರಲೇಬೇಕೆಂದಿರುವಾಗ ಸಂಪರ್ಕ ಭಾಷೆಯಾಗಲಿರುವ ಹಿಂದಿಯ ಪ್ರಭಾವ ಎಷ್ಟು ಹೆಚ್ಚಿದರೂ ಪ್ರಾದೇಶಿಕ ಭಾಷೆಗೆ ಕುಂದು ಬಾರದು. ಸಂಪರ್ಕ ಭಾಷೆಯ ಮತ್ತು ಪ್ರಾದೇಶಿಕ ಭಾಷೆಗಳ ಕಾರ್ಯ ವಲಯಗಳು ಮತ್ತು ಧ್ಯೇಯೋದ್ದೇಶಗಳು ಬಹು ಮಟ್ಟಿಗೆ ಭಿನ್ನವಾಗಿರುವಾಗ ಸಂಪರ್ಕ ಭಾಷೆಯಿಂದ ಪ್ರಾದೇಶಿಕ ಭಾಷೆಯ ಅಸ್ತಿತ್ವಕ್ಕಾಗಲಿ ಬೆಳಣಿಗೆಗಾಗಲಿ ಬಾಧೆ ತಟ್ಟೀತೆಂಬ ಭಯ ಅವಾಸ್ತವ. ದಕ್ಷಿಣ ಭಾರತದ ಪ್ರಾದೇಶಿಕ ಭಾಷೆಗಳು ಸತ್ವದಲ್ಲಿ ಮತ್ತು ಶ್ರೀಮಂತಿಕೆಯಲ್ಲಿ ಹಿಂದೀ ಭಾಷೆಗಿಂತಲೂ ಮಿಗಿಲಾಗಿದ್ದು ಈ ಭಾಷಾ ಸಂಪರ್ಕ-ಸಂಸ್ಪರ್ಧೆಗಳ ಪರಿಣಾಮವಾಗಿ ಪರಸ್ಪರ ಸತ್ವಾಭಿವೃದ್ಧಿಗೂ ಪೋಷಣೆಯೇ ಒದಗೀತು. ಅಲ್ಲದೆ ಪ್ರಾದೇಶಿಕ ಭಾಷೆಗಳ ಸರ್ವಾಂಗೀಣ ಅಭಿವೃದ್ಧಿಗೂ ಕ್ರಮಬದ್ಧವಾದ ಯೋಜನೆಗಳಿರಲೇಬೇಕೆಂಬುದನ್ನು ಬೇರೆ ಹೇಳಬೇಕೆ?

### 14. ಮುಖ್ಯ ಗುರಿ - ರಾಷ್ಟ್ರದ ಪ್ರಗತಿ

ಒಟ್ಟಿನಲ್ಲಿ ಭಾರತ ರಾಷ್ಟ್ರದ ಪ್ರಜಾಪ್ರಭುತ್ವದ ಯಶಸ್ವೀ ಸಾಧನೆಗೆ ನಮ್ಮೀ ಭಾಷಾ ಸಮಸ್ಯೆ ಕಾಲ್ತೊಡಕಾಗಕೂಡದು. ಇದೀಗ ಭಾಷಾ ಸಮಸ್ಯೆ ಭಾರತದ ಐಕ್ಯತೆಗೆ ಗಂಡಾಂತರಕಾರಿಯಾಗುತ್ತಿರುವಂತೆ ಭಾಸವಾಗುತ್ತಿರುವುದು ಒಂದು ಅನಿಷ್ಟ. ಈ ಅನಿಷ್ಟ ತೊಲಗುವಂತೆ ನೋಡಿಕೊಳ್ಳಲೆಂದೇ ತಜ್ಞರಾದವರು ತ್ರಿಭಾಷಾ ಸೂತ್ರವನ್ನು ದೇಶದ ಮುಂದೆ ಇರಿಸಿದ್ದಾರೆ. ಅದೇ ಸದ್ಯದ ನಮ್ಮೀ ಭಾಷಾ ಸಮಸ್ಯೆಗೆ ಪರಿಹಾರ ಸೂತ್ರವೆಂದು ಕಾಣುತ್ತದೆ. ಇದರಿಂದ ಭಾಷೆಯ ಪ್ರಶ್ನೆ ಬೇಗನೇ ಬಗೆಹರಿದು ಭಾರತದ ಕೋಟ್ಯಂತರ ಜನತೆಯ ಮುಖ್ಯ ಗುರಿಯಾಗಿರುವ ಸುಖೀ ರಾಷ್ಟ್ರದತ್ತ ಪ್ರಗತಿಯ ಹೆಜ್ಜೆ ಇರಿಸುವುದು ಪ್ರತಿಯೊಬ್ಬ ಭಾರತೀಯನ ಪವಿತ್ರ ಕರ್ತವ್ಯವಾಗಿದೆ.

ದಿ. ೧೦-೮-೧೯೬೬

ಶ್ರೀ ಮಾತೆಯವರ ಅಮೃತವಾಣಿ

# ಕೆಲವು ಸತ್ಯದ ಗುಟುಕುಗಳು

ಎಸ್.ಆರ್.ಮುಳಗಿ

ಮಕ್ಕಳು ಚಿಕ್ಕವರಿರುವಾಗ ಅವರಿಗೆ ಕೆಲವು ಸತ್ಯದ ಗುಟುಕುಗಳನ್ನು ಕೊಡುತ್ತ ಇರುವುದು ತುಂಬ ಹಿತಕಾರಿ. ಇದರಿಂದ ಮಕ್ಕಳು ಬೆಳೆಯುತ್ತಿದ್ದ ಹಾಗೆಯೆ ಅರಳುತ್ತ ಹೋಗುತ್ತಾರೆ. ಇದು ತಾಯ್ತಂದೆಗಳು ಮಾಡುವ ಚೆಲುವಾದ ಕಾರ್ಯವೆಂದು ಪಾಂಡಿಚೆರಿಯ ಶ್ರೀ ಅರವಿಂದಾಶ್ರಮದ ಶ್ರೀಮಾತೆಯವರು ಹೇಳಿದ್ದಾರೆ- ಅವರು ಹೇಳಿರುವ ಸತ್ಯದ ಗುಟುಕುಗಳಲ್ಲಿ ಕೆಲವನ್ನು ಮಾತ್ರ ಈಗ ತಮ್ಮ ಅವಗಾಹನೆಗೆ ಮಂಡಿಸುತ್ತಿದ್ದೇನೆ.

ಮೊಟ್ಟಮೊದಲು, ಮಕ್ಕಳಿಗೆ ಕಲಿಸಲೇಬೇಕಾದುದೇನೆಂದರೆ, - ಪರಿಣಾಮಗಳೇನೇ ಆಗುತ್ತಿದ್ದರೂ ಸುಳ್ಳು ಹೇಳದಿರುವುದು. ಸಿಟ್ಟು-ಸೆಡವು, ಕೆರಳಿಕೆ, ಚೀರಾಟ, ರೇಗಾಟ ಮುಂತಾದ ಮನಸ್ಸಿಗೆ ನೋವುಂಟು ಮಾಡುವುದನ್ನು ಹತೋಟಿಯಲ್ಲಿರಿಸಿಕೊಳ್ಳುವುದು. ದೇವರ ಬಗ್ಗೆ ಸಂಪೂರ್ಣ ಭಕ್ತಿಭಾವ ತಳೆಯುವುದು. ಮುಖ್ಯವಾಗಿ, ತನ್ನನ್ನು ತಾನು ಅರಿತುಕೊಳ್ಳುವುದು ಮತ್ತು ತನ್ನ ಮನದ ಮೇಲೆ ನಿಯಂತ್ರಣವಿರಿಸಿಕೊಳ್ಳುವುದು, - ಇವೆರಡನ್ನು ಮಗು ಬೆಳೆಯುತ್ತಿರುವಂತೆಯೇ ತಾಯ್ತಂದೆಗಳು ಅದಕ್ಕೆ ಅರ್ಥವಾಗುವಂತೆ, ಅದರ ಮನದ ಮೇಲೆ ಮುದ್ರೆಯೊತ್ತಿದಂತೆ ಕಥೆಗಳ ರೂಪದಲ್ಲಿ ತಿಳಿಸಿ ಹೇಳುತ್ತಿರಬೇಕು. ತನ್ನ ತಾನರಿತುಕೊಳ್ಳುವುದು ಎಂದರೆ, - ತಾನು ಮಾಡುತ್ತಿರುವ ಕೆಲಸಗಳ ಮತ್ತು ತನ್ನ ಯೋಚನೆಗಳ ಹಿಂದೆ ಇರುವ ಉದ್ದೇಶಗಳೇನು? ತಾನು ಹೀಗೆ ಮಾಡುತ್ತಿರುವುದೇಕೆ ? ತನ್ನೊಳಗೆ ಹೀಗೇಕಾಗುತ್ತದೆ ? ಎಂಬುದನ್ನು ಅರಿತುಕೊಳ್ಳುವುದು. ಇನ್ನು ತನ್ನ ಮೇಲೆ ಹತೋಟಿಯಿರಿಸಿಕೊಳ್ಳುವುದು ಎಂದರೆ, - ತಾನು ವಿವೇಚನೆ ಮಾಡಿ ನಿರ್ಧರಿಸಿಕೊಂಡುದನ್ನು ಮಾಡುವುದು, ಹೀಗೆ ಮಾಡುವಲ್ಲಿ ಇನ್ನಾರ ಮಾತಿಗೂ ಕಿವಿ ಕೊಡದಿರುವುದು; ಮತ್ತು ಭಾವೋದ್ರೇಕಗಳಿಗೆ, ದುರಾಶೆ-ದುರಾಕಾಂಕ್ಷೆಗಳಿಗೆ ಇಲ್ಲವೆ ಚಿತ್ರ ವಿಚಿತ್ರ ಕಲ್ಪನೆ - ಊಹೆಗಳಿಗೆ ಎಡೆ ಕೊಡದಿರುವುದು. ಇಷ್ಟನ್ನು ಕಲಿಸುವುದರ ಜತೆಗೆ, ಸರ್ವ ವ್ಯಾಪಿಯೂ, ಸರ್ವಜ್ಞನೂ, ಸರ್ವ ಶಕ್ತನೂ ಆಗಿರುವ ಭಗವಂತನಲ್ಲಿ ಸಂಪೂರ್ಣ ಭಕ್ತಿ ಇರಿಸುವುದನ್ನು ಮಕ್ಕಳ ಮನ ಮುಟ್ಟುವಂತೆ ಚಿಕ್ಕಂದಿನಿಂದಲೇ ಕಲಿಸುವುತ್ತಿರುವುದು ತಾಯ್ತಂದೆಗಳು ಅವರಿಗೆ ನೀಡುವ ಅತ್ಯುತ್ಕೃಷ್ಟ ಕೊಡುಗೆ ಎಂದು ಶ್ರೀ ಮಾತೆಯವರು ಹೇಳುತ್ತಾರೆ. ಹೀಗೆಯೇ ಮುಂದುವರಿಯುತ್ತ ಶ್ರೀ ಮಾತೆಯವರು ತಾಯ್ತಂದೆಗಳಿಗೂ ಒಂದು ಕಿವಿಮಾತು ಹೇಳುತ್ತಾರೆ : ಮಕ್ಕಳ ಶಿಕ್ಷಣದ ಬಗ್ಗೆ ಯೋಚನೆ ಮಾಡುತ್ತಿರುವ ತಾಯ್ತಂದೆಗಳು ತಾವು ಮಕ್ಕಳಿಗೆ ಉತ್ತಮ ಮಾದರಿಯಾಗಬೇಕೆಂಬುದನ್ನು ಮೊದಲು ಅರಿತುಕೊಳ್ಳಬೇಕು. ಒಂದು ಮಗುವಿಗೆ ಏನನ್ನಾದರೂ ಕಲಿಸುವ ಮೊದಲು ತಾವು ಅದನ್ನು ಚೆನ್ನಾಗಿ ಕಲಿತುಕೊಂಡಿರಬೇಕು. ಮತ್ತು ತಮ್ಮನ್ನು ತಾವರಿತುಕೊಂಡು, ತಮ್ಮ ಮೇಲೆ ಹತೋಟಿ ಇರಿಸಿಕೊಂಡಿರಬೇಕು. ತಾಯ್ತಂದೆಗಳು ಹಾಗಿಲ್ಲದಿದ್ದರೆ, ತಮ್ಮ ಮಕ್ಕಳಿಗೆ ತಾವೇ ಕೆಟ್ಟ ಮಾದರಿಯಾಗುತ್ತಾರೆ ! ಮಾತಿಗಿಂತ ಒಳ್ಳೆಯ

ಮನೋಭಾವ, ನಿಶ್ಚಲ ಧೋರಣೆ, ಆತ್ಮಸಂಯಮ-ಇವೇ ಮುಂತಾದ ಸದ್ಗುಣಗಳು ಮಕ್ಕಳಿಗೆ ಮನವರಿಕೆಯಾಗಬೇಕಾದರೆ ಅಂಥ ಸದ್ಗುಣಗಳ ಆದರ್ಶ ಅವರ ಮುಂದೆ ಇರಬೇಕಾಗುತ್ತದೆ. ಆಗ ಈ ಸದ್ಗುಣಗಳು ಮಕ್ಕಳಲ್ಲಿ ಪ್ರತಿಬಿಂಬಿತವಾಗುತ್ತದೆ. ಮಕ್ಕಳು ಅಂಥ ತಾಯ್ತಂದೆಗಳ ಬಗ್ಗೆ ಆದರಾಭಿಮಾನ ತಳೆದಿರುತ್ತಾರೆ. ಆದರ್ಶ ತಾಯ್ತಂದೆಗಳು ಮಕ್ಕಳಿಗೆ ದೇವಸಮಾನರಾಗಿರುತ್ತಾರೆ. ಅವರನ್ನು ಅನುಸರಿಸಿ ಬೆಳೆವ ಇಂದಿನ ಮಕ್ಕಳು ನಾಳಿನ ದೇಶೋದ್ದಾರಕ್ಕೆ, ಜಗದುದ್ಧಾರಕ್ಕೆ ಕಾರಣೀಭೂತರಾಗುತ್ತಾರೆ !

# ಅಂಬಿಕಾತನಯದತ್ತ ಬೇಂದ್ರೆಯವರನ್ನು ಕುರಿತು

## (ಜನ್ಮ ಶತಾಬ್ಧಿ ಸಂದರ್ಭದಲ್ಲಿ)

**ಎಸ್.ಆರ್.ಮಳಗಿ**

ಅಂಬಿಕಾತನಯದತ್ತ-ಬೇಂದ್ರೆಯವರದು ಅಪ್ರತಿಮ ಕಾವ್ಯ ಪ್ರತಿಭೆ. ಇವರ ಶೈಲಿಯ ಆಕರ್ಷಣೆಗೆ ಸಿಲುಕಿ ಉತ್ತರ ಕರ್ನಾಟಕದಲ್ಲಿ ನೂರಾರು ಕವಿಗಳ ಸೃಷ್ಟಿಯೇ ಆಯ್ತು. ಅನುಸರಣೆ-ಅನುಕರಣೆಗಳೇನಿದ್ದರೂ ಬೇಂದ್ರೆಯವರು ಅನನುಕರಣೀಯರು! ಸ್ವತಂತ್ರ ಭಾರತ, ಏಕತಂತ್ರ ಕರ್ನಾಟಕದ ಚಳವಳಿಗಳಲ್ಲಿ ಹಾಯ್ದು ಬಂದ ಜಾಗೃತ ಬಾಳಿನೊಂದಿಗೆ ಅವರ ಕಾವ್ಯ ಹುರಿಗೊಂಡು ಬೆಳೆಯಿತು. ಭಾರತದ ಚೈತನ್ಯ, ಸ್ವಾತಂತ್ರ್ಯ ಕನ್ನಡ ನಾಡು-ನುಡಿಗಳ ಚೆಲುವು ಒಲವುಗಳ ಬಗ್ಗೆ ಇವರ ಕವನಗಳಲ್ಲಿ ಉಕ್ಕಿದ ಸ್ವಾಭಿಮಾನ ಮಲಗಿದ್ದ ಜನತೆಯನ್ನು ಎಚ್ಚರಿಸಿತು. ಜೊತೆಗೆ ಇಡಿಯ ವಿಶ್ವದ ಮತ್ತು ಮಾನವ ಕುಲದ ಚಿಂತನದವರೆಗೂ ಇವರ ಪ್ರತಿಭಾ ಪಕ್ಷಿಯ ರೆಕ್ಕೆಗಳು ಹರಡಿದವು ! ಬೇಂದ್ರೆಯವರಿಗೆ ಜೀವನವೇ ಕಾವ್ಯ, ಕಾವ್ಯವೇ ಜೀವನವಾಗಿತ್ತು. ಅವರು ಆಡಿದ್ದೆಲ್ಲ ಕಾವ್ಯ-

'ಬಂದ ಮಾತ ಆಡಿಬಿಡುವೆ ! ನಡೆದ ಮಾತ ನೋಡಿಬಿಡುವೆ
ಆಡಿಬಿಡುವೆ ಹಾಗೆ ಬಿಡುವೆ ! ನಿಲ್ಲಗೊಡೆನು ನಡುವೆ ನಡುವೆ.
'- ಮುಕ್ತ ಕಂಠ' ಕವನದ ಉಕ್ತಿಗಳಿವು.

ಟೊಂಕದ ಮ್ಯಾಲೆ ಕೈ ಇಟಕೊಂಡು ! ಬಿಂಕದಾಕಿ ಯಾರ ಈಕಿ ?
ವಂಕೀ ತೋಳ ತೋರಿಸ್ತಾಳ ! ಸುಂಕದ ಕಟ್ಟೆವಗ
ಸುಂಕSSದಕಟ್ಟೆವಗ !

-ನೂರಾರು ಬಗೆಯ ಇಂಥ ಲಾವಣಿಹಾಡಿನ ಬಂಧಗಳಲ್ಲಿ ಹೊಂದಿಕೊಂಡ ಹಳ್ಳಿಗರ ಆಡುಮಾತಿನ ಹದ ಅನುಪಮು !

ಹಾಸ್ಯ - ವಿಡಂಬನೆಗಳಲ್ಲಿ ಬೇಂದ್ರೆಯವರದು, ಹರಿತ ಬುದ್ಧಿ ! ಅವರ 'ಕಾಣಿಕೆ', 'ಕಿಡಿಕಿಡಿ', 'ಬಿಡಿಮುತ್ತು' 'ವಚನ' ಗಳು ಸಮಯ ಸ್ಫೂರ್ತಿಯ ಕಿಡಿಗಳು ! ಉದಾ:

'ಗಾಂಧೀಜಿಯಂತಿಯ ದಿನ ಸತ್ಯವನ್ನಾಡೋಣ
ಸುಳ್ಳಿಗೋ ಇಡಿ ವರುಷ ತೆರವೆ ಇಹುದು' !

ಇನ್ನೊಂದು - 'ಈ ಬೆಳಕ ಬಣ್ಣಿಸಲು ಯಾವ ವರ್ಣಕೆ ಶಕ್ತಿ ?'

ಮತ್ತೊಂದು - 'ಕರ್ಮವಿಲ್ಲದಾ ಧರ್ಮವದೇಕೆ ?
ಧರ್ಮಧಾರಣೆಯು ಹೆಣಕ್ಕೆ ಬೇಕೆ ?'

ಅಲ್ಲಮ ಪ್ರಭು, ಕುಮಾರವ್ಯಾಸ, ಪುರಂದರ-ಕನಕದಾಸರು, ಸರ್ವಜ್ಞ, ಶರೀಫ್ ಸಾಹೇಬರು - ಇವರುಗಳ ತರುವಾಯದಲ್ಲಿ ಬಂದ ಈ ಬಗೆಯ ಬೆಡಗುನುಡಿ ಇಷ್ಟೊಂದು ವಿವಿಧ ರೂಪಗಳಲ್ಲಿ ಕನ್ನಡ ಕಾವ್ಯಕ್ಕೆ ಸಂದುದು ಬೇಂದ್ರೆಯವರಿಂದಲೇ.

'ನಕ್ಕಾಂವ ಗೆದಾಂವ' ಎಂಬುದು ಬೇಂದ್ರೆಯವರು ಜಗತ್ತಿಗೆ ನೀಡಿದ ಸಂದೇಶ ! 'ನನ್ನ ಕೈಯ ಹಿಡಿದಾಕೆ' ಎಂಬ ಅವರ ಸ್ವಾನುಭವದ ರಸಭರಿತ ಹಾಡಿನಲ್ಲಿ ಹೊಮ್ಮಿದ್ದು :

ನನ್ನ ಕೈಯ ಹಿಡಿದಾಕೆ ಅಳುನುಂಗಿ ನಗುವೊಮ್ಮೆ ನಾನೂನು ನಕ್ಕೇನಽ ॥
ಇಲದಿರಕ ನಿನ್ನ ಅಳುವ ಹುಚ್ಚು ಹಳ್ಳದ ಕಳ್ಳ ಹುದುಲಾಗ ಸಿಕ್ಕೇನಽ ॥
ಜಗದಾಗ ಯಾವಾವ ನೆರಳು ಬೆಳಕಿನಾಗೆ ಹಗಲಿರುಳು ಇದ್ದಾಂವ ॥
ಎದ್ದೇನಽ ಬಿದ್ದೇನಽ ಕತ್ತಲು ಬಿಸಿಲೇನಽ ನಕ್ಕಾಂವ ಗೆದ್ದಾಂವ॥

ಈ ಸಂದೇಶವು ಲೋಕದ ಎಲ್ಲ ದಂಪತಿಗಳನ್ನು ಕುರಿತದ್ದು. ಕವಿ ಅಂಬಿಕಾತನಯದತ್ತರ ಕೈಹಿಡಿದ ಬೇಂದ್ರೆಯವರನ್ನು ಕುರಿತದ್ದು. ಅವರೇ ಹೀಗೆ ಹೇಳುತ್ತಿದ್ದರು : ' ನನ್ನ ಹುಟ್ಟುಹಬ್ಬಗಳನ್ನು ಸಾರ್ವಜನಿಕರು ಮಾಡಿದ್ದಾರೆ - ಬೇಂದ್ರೇಗಲ್ಲ, ಅಂಬಿಕಾತನಯದತ್ತಗ. ಬೇಂದ್ರೆ ಅಂಬಿಕಾತನಯದತ್ತರ ಸೆಕ್ರೆಟರಿ ಅಂತ ತಿಳಿದು ಬೇಂದ್ರೇಗ ಹುಟ್ಟುಹಬ್ಬ. ಯಾಕಂದರೆ, ಅದು Dividual, ಆದರೆ ಕವಿ Individual ! the Poet in me dictates and I take down." ಬೇಂದ್ರೆಯವರು ತಮ್ಮ ಹಲಬಗೆಯ ಕೃತಿಗಳಲ್ಲಿ ಹರಟೆಯ ಮಾತಿನಲ್ಲಿ, ಭಾಷಣಗಳಲ್ಲಿ ಎಲ್ಲೆಲ್ಲೂ ನಗೆಯನ್ನೂ ಗೆಲುವನ್ನೂ ಸೂಸಿ ಹೋದರು ! ಅವರು ನಗೆಯ ನಾಡಿನಲ್ಲೆ ಹುಟ್ಟಿ ಬೆಳೆದವರು, ಅಲ್ಲಿಯ ಬೆಳಕಿನ ಹೊಳೆಯಲ್ಲಿ ಮಿಂದವರು. ಆಗ ಮೇಲೆ ಕೆಳಗೆ, ಸುತ್ತುಮುತ್ತು, ಒಳಗೆ ಹೊರಗೆ ಎಲ್ಲೆಲ್ಲೂ ಗೆಲುವು - ಹಿಗ್ಗು ಅವರನ್ನು ಆವರಿಸಿತ್ತು. ಈ ಹಿಗ್ಗೇ ಅವರ ಕಾವ್ಯದ ಮೂಲ, ನಗೆಯ ಮೂಲ. ಲೌಕಿಕದ ಸುಖದುಃಖದೊಳಗಿಂದ ಹಿಗ್ಗಿನ ಹಾಲನ್ನು ಹಿಂಡಿ ಪಡೆದ ವೀರ ಜೀವ ಅವರು ! ಬಾಳಿನುದ್ದಕ್ಕೂ ನಕ್ಕು ನಗಿಸಿ ಗೆದ್ದರು ! ಇದೇ ಅವರ ಪರಿಪೂರ್ಣ ಜೀವನ!

# ಜಾಗತಿಕ ರಂಗಭೂಮಿ ದಿನ

ಎಸ್.ಆರ್.ಮಳಗಿ

ಕಾವ್ಯದಲ್ಲಿ ಮುಖ್ಯವಾಗಿ ಎರಡು ವಿಧ : ಶ್ರವ್ಯ ಹಾಗೂ ದೃಶ್ಯ ಎಂದು. ದೃಶ್ಯಕಾವ್ಯವೆಂಬುದೇ ನಾಟಕ. ಕಾವ್ಯ ಮೀಮಾಂಸೆಯಲ್ಲಿ ಕಾವ್ಯಕ್ಕೆ ಅನ್ವಯಿಸುವ ಮಾತು ನಾಟಕಕ್ಕೂ ಬಹುಮಟ್ಟಿಗೆ ಅನ್ವಯಿಸುತ್ತದೆ. ಪಾಶ್ಚಾತ್ಯ ಕಾವ್ಯ ಮೀಮಾಂಸಕರಾದ ಎಜ್ರಾ ಪೌಂಡ್ ಮತ್ತು ಸಿ.ಡಿ ಲೂಯಿ ಎಂಬಂಥವರು ಹೇಳುವ ಪೊಯೆಟಿಕ್ ಇಮೇಜ್ ಎಂದರೆ 'ಕಾವ್ಯಪ್ರತಿಮೆ' ಎಂಬ ಪರಿಕಲ್ಪನೆ ಕನ್ನಡದಲ್ಲಿ ಪ್ರಚಲಿತವಾಗಿದೆ. ಅದೇ ಕಾವ್ಯದ ಸರ್ವಸ್ವ ಎಂಬಷ್ಟು ಅದರ ಮಹತ್ವ ಬೆಳೆದಿದೆ. ಭಾರತೀಯ ಅಲಂಕಾರಶಾಸ್ತ್ರದ ಸಾದೃಶ್ಯಮೂಲ ಅಲಂಕಾರಗಳಾದ ಉಪಮೆ, ರೂಪಕಾದಿಗಳು ಮತ್ತು ಧ್ವನಿತತ್ವ ಇವುಗಳ ಮುಂದುವರಿಕೆಯೇ 'ಇಮೇಜ್' ಅಥವಾ 'ಪ್ರತಿಮೆ'ಯ ಬೆಳವಣಿಗೆ ಎನ್ನಬಹುದಾಗಿದೆ. ಕಾವ್ಯಪ್ರತಿಮೆ ಕಣ್ಣಮುಂದೆ ಚಿತ್ರವೊಂದನ್ನು ಕಟ್ಟಿ, ಮನಸನ್ನು ಪ್ರಚೋದಿಸಿ, ಭಾವಾತ್ಮಕ ಹಾಗೂ ಬೌದ್ಧಿಕ ಅನುಭವಗಳ ಸಂಕೀರ್ಣತೆಯತ್ತ, ಸಹೃದಯ ಪ್ರೇಕ್ಷಕನನ್ನು ಕರೆದೊಯ್ಯುತ್ತದೆ. ಇದು ಡ್ರೈಡನ್‌ನ ಅಭಿಪ್ರಾಯ. ಬಹುಮಟ್ಟಿಗೆ ಧ್ವನಿತತ್ವದ ವಿವರಣೆಯೇ ಇದು.

ಕುವೆಂಪು ಅವರು 'ನಾಟಕಕಲೆಯಲ್ಲಿ' 'ಪ್ರತಿಕೃತಿ' ಮತ್ತು 'ಪ್ರತಿಮಾ ವಿಧಾನಗಳು' ಎಂಬ ಲೇಖನದಲ್ಲಿ ಸುದೀರ್ಘವಾಗಿ ವಿಶ್ಲೇಷಿಸಿದ್ದು ಇಲ್ಲಿ ಪ್ರಸ್ತುತವಾಗಿದೆ. ಅದರ ತಾತ್ಪರ್ಯವನ್ನು ಇಲ್ಲಿ ಮಂಡಿಸಲಿಚ್ಛಿಸುತ್ತೇನೆ.

'ಪ್ರತಿಕೃತಿ' ಎಂಬ ಪರಿಕಲ್ಪನೆ ಜೀವನದಲ್ಲಿ ಇದ್ದುದನ್ನು ಇದ್ದಂತೆಯೆ, ನಡೆದುದನ್ನು ನಡೆದಂತೆಯೆ ಚಿತ್ರಿಸುವುದು. ಇದು ಬರಿ ಅನುಕರಣೆ. ಆದರೆ 'ಇಮೇಜ್' ಅಥವಾ 'ಪ್ರತಿಮೆ' ಎಂಬುದು ಜೀವನದಲ್ಲಿ ಇದ್ದುದಾಗಲಿ, ನಡೆದುದಾಗಲಿ ನಾಟಕಕಾರನಿಗೆ ಹೇಗೆ ಕಂಡಿತೊ ಹಾಗೆಯೇ ಆ ಅನುಭವ- ವಿಶೇಷಕ್ಕೆ ರೂಪು ಕೊಡುವ ಪ್ರಯತ್ನ ನಡೆಸುತ್ತದೆ. ಪ್ರತಿಮಾ ದೃಷ್ಟಿಗೆ ಕಂಡ ವಸ್ತುವಿಗಿಂತ ಆ ವಸ್ತು ಪ್ರಚೋದಿಸುವ ಅನುಭವ ವಿಶೇಷವೆ ಮುಖ್ಯ. ರಂಗಭೂಮಿಯಲ್ಲಿ ನಡೆಯುವ ಕಥಾನಕಕ್ಕೆ ಪ್ರೇರಕವಾಗುವ ಶಕ್ತಿ ಅಥವಾ ಚೈತನ್ಯವೇ ಪ್ರತಿಮಾದೃಷ್ಟಿಗೆ ಕಲಾವಿಷಯವಾಗುತ್ತದೆ. ಆದರೆ 'ಪ್ರತಿಕೃತಿ' ವಿಧಾನದ ಆಶಯದ ಗುರಿ ಕೇವಲ ಇಂದ್ರಿಯ ಜನ್ಯ ಬಾಹ್ಯಸತ್ಯ; ಅದು ತದ್ರೂಪ ನಿರೂಪಣೆ, ಛಾಯಾಗ್ರಹಣ-ಫೋಟೊಗ್ರಫಿ. ಪ್ರತಿಮಾ ವಿಧಾನದ ಆಶಯವೋ ಅತೀಂದ್ರಿಯದ್ದು; ಅದು ಧ್ಯೇಯಾತ್ಮಕವಾದ ಭಾವಸತ್ಯ. 'ಪ್ರತಿಕೃತಿ'ಯ ದೃಷ್ಟಿ ಲೌಕಿಕದ್ದು; ಅದರ ಪ್ರಯೋಜನವೂ ಲೌಕಿಕವೇ. ಆದರೆ ಪ್ರತಿಮಾ ದೃಷ್ಟಿ ಅಸಾಮಾನ್ಯ, ಅಲೌಕಿಕ; ಅದರ ಪ್ರಯೋಜನವೂ ಅಲೌಕಿಕವೆ.

ಕಲೆಯಲ್ಲಿ ಮತ್ತು ಕಾವ್ಯ, ನಾಟಕಗಳಲ್ಲಿ 'ಪ್ರತಿಕೃತಿ' - ವಿಧಾನ, 'ಪ್ರತಿಮಾ' ವಿಧಾನಗಳೆರಡೂ ಇರುತ್ತವೆ. ಸಾಮಾಜಿಕ ನಾಟಕಗಳು ಮುಕ್ಕಾಲು ಪಾಲು 'ಪ್ರತಿಕೃತಿ' ವಿಧಾನಕ್ಕೆ ಒಳಪಟ್ಟಿರುತ್ತವೆ. ಇವುಗಳ ಹತ್ತಿರ ಹತ್ತಿರಕ್ಕೆ ಐತಿಹಾಸಿಕ ನಾಟಕಗಳು ಬರುತ್ತವೆ. ಪುರಾಣ ಪ್ರಪಂಚವೆಲ್ಲ 'ಪ್ರತಿಮಾ' ಪ್ರಪಂಚವೇ ಆಗಿರುವುದರಿಂದ, ಪೌರಾಣಿಕ ನಾಟಕಗಳೆಲ್ಲವೂ ಅನಿವಾರ್ಯವಾಗಿ 'ಪ್ರತಿಮಾ' ದೃಷ್ಟಿಯಿಂದ ಸ್ಫುರಣಗೊಂಡು

ಮೈದಳೆಯುತ್ತವೆ. ಆದರೆ ಪೌರಾಣಿಕ ಪ್ರಪಂಚದಲ್ಲೂ 'ಪ್ರತಿಕೃತಿ' ವಿಧಾನವನ್ನು ಎಂದರೆ ತದ್ರೂಪ ಅನುಕರಣ ತತ್ವವನ್ನು ಹೊಂದಿಸುವ ಪ್ರಯತ್ನದ ವಿಕೃತ ಫಲಗಳನ್ನು ಕೆಲವು ಆಧುನಿಕ ನಾಟಕಗಳಲ್ಲಿ ಕಾಣಬಹುದಾಗಿದೆ. ಇನ್ನು ಕಾಲ್ಪನಿಕ ನಾಟಕಗಳಲ್ಲಿ ನಾಟಕಕಾರನ ಕಲಾಕೌಶಲ ಮತ್ತು ಪ್ರತಿಭೆಯನ್ನು ಅನುಸರಿಸಿ 'ಪ್ರತಿಕೃತಿ' ಮತ್ತು 'ಪ್ರತಿಮಾ' ವಿಧಾನಗಳೆರಡೂ ಪ್ರಯೋಗಿಸಲ್ಪಟ್ಟದ್ದು ಕಂಡುಬರುವದುಂಟು. ಕುವೆಂಪು ಈ ವಿಚಾರದಲ್ಲಿ ಸಾಮಾಜಿಕ, ಐತಿಹಾಸಿಕ, ಕಾಲ್ಪನಿಕ, ಪೌರಾಣಿಕ ನಾಟಕಗಳ ಉದಾಹರಣೆಗಳನ್ನು ಎತ್ತಿ ತೋರಿಸಿ 'ಪ್ರತಿಕೃತಿ' ಮತ್ತು 'ಪ್ರತಿಮಾ' ವಿಧಾನಗಳನ್ನು ಸ್ಪಷ್ಟಪಡಿಸುತ್ತಾರೆ. ಅವರ ವಿಶ್ಲೇಷಣೆ ಚಿಂತನಾರ್ಹವಾಗಿದೆ.

10-01-2002

# ಹೆನ್ರಿ ಡೇವಿಡ್ ಥೋರೋ

**ಎಸ್.ಆರ್.ಮಳಗಿ**

ಹೆನ್ರಿ ಡೇವಿಡ್ ಥೋರೋ ಜಗತ್ತಿನ ಮಹಾತತ್ವಜ್ಞಾನಿಗಳಲ್ಲಿ ಒಬ್ಬ. ಮಹಾತ್ಮಾ ಗಾಂಧೀಜಿಯವರು ದಕ್ಷಿಣ ಆಫ್ರಿಕದ ಸೆರೆಮನೆಯಲ್ಲಿದ್ದಾಗ ಅವರು ಥೋರೋನ ಉದಾತ್ತ ವಿಚಾರಗಳಿಂದ ಪ್ರೇರಿತರಾಗಿದ್ದರು. ಅವರು ಆಫ್ರಿಕದಲ್ಲಿ ಮತ್ತು ಅನಂತರ ಭಾರತದಲ್ಲಿ ನಡೆಸಿದ ಸತ್ಯಾಗ್ರಹ, ಮತ್ತು ಕಾನೂನು ಭಂಗ ಚಳವಳಿಗಳಿಗೆ ಆತನ ಗ್ರಂಥಗಳು ಪ್ರಚೋದನೆ ನೀಡಿದವು ಎಂದು ಅವರೇ ಸೂಚಿಸಿದ್ದಾರೆ.

ಥೋರೋ 1845ರಲ್ಲಿ ವಾಲ್ಡನ್ ಸರೋವರದ ಹತ್ತಿರದ ಕಾಡೊಂದರಲ್ಲಿ ಏಕಾಂಗಿಯಾಗಿ ವಾಸಮಾಡುತ್ತಿದ್ದಾಗ ಸ್ವಾನುಭವದಿಂದ ಗಳಿಸಿದ ಜ್ಞಾನದ ಫಲವೇ ಆತನ ವಾಲ್ಡನ್ ಎಂಬ ಗ್ರಂಥ. ಇದು ಎಲ್ಲರೂ ಇಂದು ಚಿಂತನ ಮಾಡಬೇಕಾದ ಉದಾತ್ತ ಭಾವನೆಗಳ ಖನಿಯಾಗಿದೆ. ಮಾನವನ ನಿಜವಾದ ಶಕ್ತಿ ಅವನಿಂದ ಸೃಷ್ಟಿಯಾದ ಸಂಘ-ಸಂಸ್ಥೆಗಳಲ್ಲಿರುವುದಕ್ಕಿಂತ ಆತನ ಹೃದಯದೊಳಗೇ ಹೆಚ್ಚಾಗಿ ಇರುವುದು ಎಂದಿದ್ದಾನೆ ಥೋರೋ.

ಒಂದೆಡೆ, ಮನುಷ್ಯನು ಸದಾ ಪ್ರಸನ್ನಚಿತ್ತನಾಗಿರಬೇಕು ಎಂಬುದನ್ನು ಕುರಿತು ಆತನು ಹೇಳಿರುವ ಮಾತುಗಳು ಚಿಂತನಾರ್ಹವಾಗಿವೆ. ಅವುಗಳ ಸಾರವಿದು :

'ಪ್ರಸನ್ನಚಿತ್ತತೆಯನ್ನು ಕಾಣಲಾರದವರು ಅದೆಷ್ಟು ಕುರುಡರು ! ಮಾನವನ ನಿಜವಾದ ಸ್ನೇಹಿತನೆಂದರೆ ಪ್ರಸನ್ನ ಚಿತ್ತತೆ. ಮಾನವನ ಪ್ರಗತಿಯ ಒಬ್ಬನೇ ಒಬ್ಬ ಮಿತ್ರನಾತ. ಈ ಮಿತ್ರನ ಸಮಾಧಾನಕ್ಕೆ, ಶ್ರದ್ಧೆಗೆ ದಣಿವೇ ಇಲ್ಲ. ಈತನು ಮಾನವನ ಹೃದಯದಲ್ಲಿ ಹುದುಗಿರುವ ದೇವವಿಗ್ರಹವನ್ನು ಪ್ರಕಟವಾಗಿ ತೋರಿಸಬೇಕು ಎನ್ನುತ್ತಾನೆ. ಆ ದೇವಬುದ್ಧಿ ಎಲ್ಲರ ಯೋಗಕ್ಷೇಮವನ್ನು ಚಿಂತಿಸುವಂಥದ್ದು. ಇದು ವಿಶಾಲವಾದುದು, ಸಂಸ್ಕಾರ ಸಂಪನ್ನವಾದುದು. ಈ ದೇವಬುದ್ಧಿ ಜಗದ ಯೋಗ್ಯವಾದ ಒಂದೆಡೆಯಲ್ಲಿ ಒಂದು ಭವ್ಯ ಮಂದಿರವನ್ನು ಕಟ್ಟಲು ಹವಣಿಸುತ್ತದೆ. ಅಲ್ಲಿಗೆ ಎಲ್ಲಾ ಜನಾಂಗಗಳ ತತ್ವಜ್ಞಾನಿಗಳು ಬಂದು ತಂಗುವಂತಿರಬೇಕು. ಈ ಮಂದಿರದ ಮಹಾದ್ವಾರದಲ್ಲಿ ಹೀಗೆ ಬರೆದಿರಬೇಕು : 'ಇಲ್ಲಿ ಮಾನವನಿಗೆ ಮಾತ್ರ ಔತಣವುಂಟು ; ಆತನಲ್ಲಿಯ ಪಶುವಿಗಲ್ಲ. ವಿರಾಮವುಳ್ಳವರು ಒಳಗೆ ಬನ್ನಿ : ಪ್ರಸನ್ನ ಚಿತ್ತರು ಒಳಗೆ ಬನ್ನಿ ; ಸರಿಯಾದ ಮಾರ್ಗವನ್ನು ಶ್ರದ್ಧೆಯಿಂದ ಹುಡುಕುವವರು ಒಳಗೆ ಬನ್ನಿ!' ಎಂದು.

'ಆದರೆ ಇಂದು ಮಾನವರು ತಮ್ಮ ಹೃದಯಗಳಲ್ಲಿಯ ದೇವವಿಗ್ರಹಗಳು ಸವೆದು ಹೋಗಿ ಬೀಳಲು ಸಿದ್ಧವಾಗಿರುವ ಶಾಸನದ ಕಲ್ಲುಗಳಾಗಿದ್ದಾರೆ !' ಎಂದಿದ್ದಾನೆ ಥೋರೋ.

# ಕುವೆಂಪು ಜನ್ಮ ಶತಾಬ್ಧಿ

**ಎಸ್.ಆರ್.ಮಳಗಿ**

ಕನ್ನಡದ ನವೋದಯ ಕಾವ್ಯದ ಪುರಸ್ಕರ್ತರಲ್ಲಿ ಮಹಾಕವಿ ಕುವೆಂಪು ಅಗ್ರಗಣ್ಯರು. ಅವರು ಕನ್ನಡದ ಪ್ರಪ್ರಥಮ ಜ್ಞಾನಪೀಠ ಪ್ರಶಸ್ತಿ ವಿಜೇತರು. ಮೇರು ಕವಿ, ರಾಷ್ಟ್ರಕವಿ ಎಂದು ಪ್ರಖ್ಯಾತರಾದವರು. ಇಂಗ್ಲೆಂಡಿನ ರೋಮಾಂಟಿಕ್ ಕವಿ ವರ್ಡ್ಸ್‌ವರ್ತ್‌ನಂತೆ ಪ್ರಕೃತಿಮಾತೆಯ ಆರಾಧಕರಿವರು. ಕನ್ನಡದ ವರ್ಡ್ಸ್‌ವರ್ತ್ ಎಂದೂ ಇವರನ್ನು ಬಣ್ಣಿಸಬಹುದಾಗಿದೆ. ಪ್ರಕೃತಿಸೌಂದರ್ಯವನ್ನು ಕಾವ್ಯವಸ್ತುವಾಗಿ ಬಳಸಿಕೊಂಡು ವಿಪುಲ ಸಂಖ್ಯೆಯಲ್ಲಿ ಭಾವಗೀತೆಗಳನ್ನು ರಚಿಸಿದವರಿವರು.

ಅಧ್ಯಾತ್ಮದ ದಿವ್ಯದೃಷ್ಟಿಯುಳ್ಳ ಕುವೆಂಪು ಅವರಿಗೆ ನಿಸರ್ಗದಲ್ಲಿ ಪರಮಾತ್ಮನ ಸನ್ನಿಧಿ ಕಂಡಿದೆ. 'ಸೂರ್ಯೋದಯ ಚಂದ್ರೋದಯ ದೇವರ ದಯ ಕಾಣೋ' ಎಂಬ ಕಾವ್ಯವಾಣಿ ಅವರ ಅಧ್ಯಾತ್ಮ ದೃಷ್ಟಿಗೆ ಹಿಡಿದ ಕನ್ನಡಿಯಾಗಿದೆ. ಅವರ ದೃಷ್ಟಿಯಲ್ಲಿ ಪರಮಾತ್ಮನೆಂಬ ವಸ್ತು ಸತ್ಯಂ, ಶಿವಂ, ಸುಂದರಂ ಆಗಿದೆ.

ಶಿವನಿಲ್ಲದೆ ಸೌಂದರ್ಯವೆ ?
ಅದು, ಶವಮುಖದಾ ಕಣ್ಣೋ !
ಶಿವ ಕಾಣದ ಕವಿ ಕುರುಡನೋ !
ಶಿವ ಕಾವ್ಯದ ಕಣ್ಣೋ !
- ಎನ್ನುತ್ತಾರೆ. 'ಆನಂದಮಯ ಜಗಹೃದಯ' ಎಂಬ ಅವರ ಕವನದಲ್ಲಿಯ ಉದ್ಗಾರಗಳಿವು.

ಭಾರತೀಯ ಆಧ್ಯಾತ್ಮಿಕ ದೃಷ್ಟಿಗೆ ಗೋಚರಿಸುವುದೆಲ್ಲವೂ ಸತ್‌ಚಿತ್-ಆನಂದದ ಸೃಷ್ಟಿ! ಸಚ್ಚಿದಾನಂದವನ್ನು ಎಲ್ಲೆಲ್ಲೂ ಕಂಡು ಈ ಕವಿ ಪುಲಕಿತರಾಗುತ್ತಾರೆ. ಪ್ರಾತಃಕಾಲದ ಸೌಂದರ್ಯವನ್ನು ಕಾಣುವ ಈ ಕವಿಗೆ ಅದರಲ್ಲಿ ಜೀವಿಸುವುದೇ ಒಂದು ರಸಾನುಭೂತಿ ! ಅದರಲ್ಲಿ ಧರ್ಮವೂ ಉಂಟು,ಸತ್ಯವೂ ಉಂಟು! ಕುವೆಂಪು ಅವರ ಇಂಥ ಸಂವೇದನೆಗಳಲ್ಲಿ ಕೀಟ್ಸ್ ಕವಿಯ 'Truth is beauty, Beauty is truth" ಎಂಬ ಸೂಕ್ತಿಯ ನೆನಪಾಗುವುದಲ್ಲವೆ ? ಆದರೆ, ಕನ್ನಡದ ಸವಿನುಡಿಯಲ್ಲಿ ಕುವೆಂಪು ಈ ಸಿದ್ಧಾಂತವನ್ನು ಪ್ರಕಟಪಡಿಸುವ ರೀತಿ ಮಾತ್ರ ಅನನ್ಯ ಸಾಧಾರಣವಾದುದು !

ನಿಸರ್ಗದ ಜೊತೆಯ ಒಡನಾಟ ಈ ಕವಿಗೆ ಜೀವನದ ಸರ್ವಸ್ವವಾಗಿದೆ. ಬಾಳಿನಲ್ಲಿಯ ಅರಿವು-ಇರುವುಗಳನ್ನು ಅವರು ಬಣ್ಣಿಸುವುದು ಹೀಗೆ -

ಅರಿವಾಸೆಯೆ ಮಾಯಾಬಂಧ
ಇರುವುದೆ ಮುಕ್ತಿಯ ಆನಂದ !

ಹಾಗೆಯೆ, ಶರತ್ಕಾಲದ ಸೂರ್ಯೋದಯದಲಿ ಬಂಗಾರದ ಹೊಳೆ ಹರಿದಾಡಿ, ತಿರೆಸಗ್ಗವಾಗುವುದನ್ನು ಕುವೆಂಪು

ಕಾಣುತ್ತಾರೆ ! ಕೊನೆಗೊಂದು ಅಸಾಮಾನ್ಯತತ್ವವನ್ನು ಶೋಧಿಸಿ, ರೋಮಾಂಚನಗೊಳ್ಳುತ್ತಾರೆ ; ಸಹೃದಯರ ಮೈಗೂ ನವಿರೇಳಿಸುತ್ತಾರೆ :-

ಕಲ್ಲಿನ ಯುಗಯುಗದರಿವೂ ಶೂನ್ಯ
ಹುಲ್ಲಿನ ಅರೆನಿಮಿಷದ ಹನಿ ಧನ್ಯ !
ತಳತಳಿಪುದೆ ಸಾರ್ಥಕ ಪುಣ್ಯ !

- ಎಂದೆನ್ನುವ ಇವರ ಪ್ರಜ್ಞೆ ಮರುಕ್ಷಣದಲ್ಲಿಯೇ ನವನವೋನ್ಮೇಷಶಾಲಿನಿಯಾಗಿ, 'ನೋಡಿದರೆಲ್ಲಿಯು ಚೈತನ್ಯ !' ಎಂದು ಅಗಾಧಪಡುತ್ತದೆ !-

ಚೇತನ ಮೂರ್ತಿಯೆ ಆ ಕಲ್ಲು ?
ತೆಗೆ, - ಜಡವೆಂಬುದೆ ಬರಿ ಸುಳ್ಳು !

ಎಂದು ಉದ್ಗಾರವೆತ್ತುತ್ತಾರೆ ಕುವೆಂಪು ಕವಿ ! ಅವರದು ನಿಸರ್ಗ ಸೌಂದರ್ಯವನ್ನು ಒಳಹೊಕ್ಕು ನೋಡುವ ಕಣ್ಣು ! ಪಕ್ಷಿ, ಹಸಿರು, ಮುಂಗಾರು, ಗಗನ, ಗಿರಿ, ಸುಗ್ಗಿ, ಕೋಕಿಲೆಯ ಕುಕಿಲು, ಶಿಲೆ, ಹರಿವ ಹೊಳೆ, ಬೀಸುವ ಗಾಳಿ, ಇವೆಲ್ಲದರಲ್ಲಿ ನಿಸರ್ಗದ ಚೈತನ್ಯಭರಿತ ಕುಣಿತವೇ ಗೋಚರಿಸುವುದು ಇವರ ಆರ್ಷ ದೃಷ್ಟಿಗೆ ! ನಿಜದಲಿ, ಕುವೆಂಪು ರಸ ಋಷಿಯೇ ಸರಿ !

# ಸಿಲ್ಲರ್ ಎಂಬ ಪಾಶ್ಚಾತ್ಯ ಕವಿ ವಾಣಿ
# ಕವಿಯ ಸ್ಥಾನ !

**ಎಸ್.ಆರ್.ಮಳಗಿ**

'ನಾನೃಷಿಃ ಕುರುತೇ ಕಾವ್ಯಂ' - 'ಋಷಿಯಲ್ಲದವನು ಕಾವ್ಯರಚನೆ ಮಾಡಲಾರ' ಎಂಬ ಸೂಕ್ತಿ ಸುಪ್ರಸಿದ್ಧ. ಕವಿ ಕಾವ್ಯರಚನೆ ಮಾಡುವಾಗ ಕಾವ್ಯಸಮಾಧಿಯಲ್ಲಿರುತ್ತಾನೆ. ಈ ಲೋಕದಲ್ಲಿದ್ದೂ ತಾನೆ ನಿರ್ಮಿಸಿಕೊಂಡ ಕನಸಿನ ಲೋಕದಲ್ಲಿ ವಿಹರಿಸುತ್ತಿರುತ್ತಾನೆ.

ಕವಿಯ ಈ ಬಗೆಯ ಜೀವನ ರೀತಿಯನ್ನು ಕಂಡಿದ್ದ ಸಿಲ್ಲರ್ ಎಂಬ ಪಾಶ್ಚಾತ್ಯ ಕವಿ ಒಂದು ಸ್ವಾರಸ್ಯಕರ ಕಥೆಯನ್ನು ಕಟ್ಟಿ ಭಾವಗೀತೆಯೊಂದನ್ನು ರಚಿಸಿದ್ದಾನೆ. ಇದರ ಶೀರ್ಷಿಕೆ 'Sharing of the Earth' - 'ಪೃಥ್ವಿಯನ್ನು ಹಂಚಿಕೊಳ್ಳುವುದು' ಇದರ ಸಾರವಿಷ್ಟು :

ಜಗವನ್ನೂ ಮಾನವರನ್ನೂ ಸೃಷ್ಟಿಸಿದನಂತರ ದೇವರು ಸ್ವರ್ಗದಿಂದ ಮಾನವರನ್ನು ಕುರಿತು ಹೀಗೆ ಸಾರಿದ :-

'ಮಾನವರೇ, ಈ ಜಗತ್ತನ್ನು ಸ್ವೀಕರಿಸಿರಿ. ನೀವೀಗ ಇದರ ಒಡೆಯರೆಂದು ಜಾಹೀರು ಪಡಿಸುತ್ತೇನೆ. ಇದನ್ನು ನಿಮ್ಮ ನಿಮ್ಮೊಳಗೆ ಹಂಚಿಕೊಳ್ಳಿರಿ. ನಿಮ್ಮ ನಿಮ್ಮ ಪಾಲುಗಳನ್ನು ನೀವೇ ನಿರ್ಣಯಿಸಿಕೊಳ್ಳಿರಿ'. ಎಂದು.

ಪ್ರತಿಯೊಬ್ಬನು-ಮುದುಕನು, ಹರೆಯದವನು-ತಂತನ್ನ ಪಾಲನ್ನು ತನ್ನಿಚ್ಛೆಯಂತೆ ಆಯ್ದುಕೊಂಡ. ಸುಗ್ಗಿಯ ಸಂಪತ್ತು ತನಗಿರಲೆಂದು ಒಕ್ಕಲಿಗ ತನ್ನ ಪಾಲಿನ ಭೂಮಿಯನ್ನು ಹಿಡಿದುಕೊಂಡ; ಶ್ರೀಮಂತ ಜಮೀನುದಾರ, - ಕಾಡು ಮೇಡುಗಳೆಲ್ಲ ತನ್ನ ಪಾಲಿನವೆಂದ ; ವರ್ತಕನು ಮಾರಾಟದ ಸರಕು ತುಂಬಿದ ಮಳಿಗೆಗಳಿಗೆ ಬೀಗ ಬಿಗಿದ ; ಮಠಾಧಿಪತಿ ದೇವಾಲಯಗಳ ಒಡೆತನ ತನ್ನದೆಂದ ; ರಾಜನು ದೇಶದ ದಾರಿ-ಹೆದ್ದಾರಿಗಳಿಗೆ ಕಾವಲಿಟ್ಟು ಪ್ರತಿಯೊಂದು ದಾರಿ ಸುಂಕವೂ ತನ್ನದೆಂದು ಡಂಗುರ ಹೊಯ್ಸಿದ.

ಹಂಚಿಕೊಳ್ಳುವುದೆಲ್ಲ ಮುಗಿದ ಮೇಲೆ ಕವಿ ಬಂದ - ಬಹಳ ತಡವಾಗಿ ; ಆತ ಬಹುದೂರದಿಂದ ಬಂದಿದ್ದ; ಕೊನೆಗೆ ಬಂದಿದ್ದ ಆತನಿಗೇನೂ ಉಳಿದಿರಲಿಲ್ಲ. ಜಗದ ಒಂದಂಗುಲದಷ್ಟು ನೆಲಕ್ಕೂ ಒಡೆಯರಿದ್ದರು!

ಈ ಪರಿಸ್ಥಿತಿಯನ್ನು ಕಂಡ ಕವಿ ಹೀಗೆ ಗೋಗರೆದ : 'ಅಯ್ಯೋ, ದುರದೃಷ್ಟವೇ, ನನ್ನದೆಂಬ ಪಾಲು ಏನೂ ಉಳಿದಿಲ್ಲವೆ ? ದೇವರೇ, ನಿನ್ನನ್ನು ಮಾತ್ರ ಅಧಿಕತಮವಾಗಿ ಪ್ರೀತಿಸುತ್ತಿರುವ ನಿನ್ನ ಮಗನಿಗೇ ಈ ಪೃಥಿವಿಯಲ್ಲಿ ಪಾಲಿಲ್ಲವೆ?' ಕವಿಯ ಆರೋಪಣೆಯ ದನಿ ದೇವರ ಕಿವಿಗೆ ಬಿತ್ತು ; ಅದೇಹೊತ್ತಿಗೆ, ದೇವರ ಸಿಂಹಾಸನದಡಿಯಲ್ಲಿ ಕವಿ ಬಿದ್ದಿದ್ದ. ಆಗ ಆತನಿಗೆ ದೇವರ ಪ್ರಶ್ನೆ ಹೀಗಿತ್ತು.

'ಸ್ವಪ್ನಲೋಕದಲ್ಲಿ ಇನ್ನೂ ಸುತ್ತಾಡುತ್ತಿರುವ ನೀನು ನನ್ನನ್ನೆ ಆರೋಪಿಸಿ ಗೊಣಗುತ್ತಿರುವೆಯ ? ಪೃಥಿವಿಯ ಹಂಚಿಕೆ ನಡೆದಾಗ ನೀನೆಲ್ಲಿದ್ದೆ?'

ಕವಿ ಉತ್ತರಿಸಿದ : 'ಅಯ್ಯೋ ದೇವರೇ, ನಿನ್ನ ಬಳಿಯೇ ಇದ್ದೆನಲ್ಲ ! ನಿನ್ನ ವೈಭವಕ್ಕೆ ನನ್ನ ಕಣ್ಣು ಕೋರೈಸಿತು ; ನಿನ್ನ ಆನಂದಮಯ ಗಾನಕ್ಕೆ ನನ್ನ ಕಿವಿ ಮಾರುಹೋಗಿತ್ತು ; ನಿನ್ನ ಈ ಸೃಷ್ಟಿಯ ಚೆಲುವು ನನ್ನ ಮನವನ್ನು ಅದೆಷ್ಟು ಸೂರೆಗೊಂಡಿತ್ತೆಂದರೆ, ನನಗೆ ಬರಬೇಕಾದ ಪಾಲನ್ನೂ ಕಳೆದುಕೊಂಡೆ ; ನನ್ನನ್ನು ಕ್ಷಮಿಸು ತಂದೇ ಎಂದ.

ಕವಿಯ ಮಾತನ್ನು ಕೇಳಿ ದೇವರೇ ನೊಂದುಕೊಂಡು ನುಡಿದ : 'ಅಯ್ಯೋ, ಪೃಥ್ವಿಯೆಲ್ಲವನ್ನೂ ಹಂಚಿಕೊಟ್ಟುದಾಯ್ತು : ಹೊಲ, ನೆಲ, ಕಾಡು, ನಾಡು, ಪೇಟೆ, ಪಟ್ಟಣ - ಎಲ್ಲಾ ಕೊಟ್ಟಾಯ್ತು. ಆದರೆ ಕವಿಯೆ, ನಿನಗೆ ಸ್ವರ್ಗದ ಮೀಸಲು ವಸತಿ ಸ್ಥಾನಗಳನ್ನು ಕೊಟ್ಟರೆ ಸ್ವೀಕರಿಸುವೆಯ ? ನೀನು ಇಲ್ಲಿಗೆ ಬಂದಾಗಲೆಲ್ಲ ನಿನಗಿಲ್ಲಿ ಪ್ರವೇಶವುಂಟು'. ಎಂದು ಸಮಾಧಾನ ಪಡಿಸಿದ.

ದೇವರ ದೃಷ್ಟಿಯಲ್ಲಿ ಕವಿಯ ಸ್ಥಾನ ಇಂಥದ್ದು !

# ‘ಮೂಡಿದ ಹೆಜ್ಜೆಗಳು’ ಎಂಬ ಭಾವಗೀತೆ

ಎಸ್.ಆರ್.ಮಳಗಿ

ಮಾರ್ಗರೆಟ್ ಫಿಶ್‌ಬ್ಯಾಕ್ ಪಾವರ್ಸ್ ಎಂಬ ದೇವಭಕ್ತೆಯಾದ ಮಹಿಳೆ ‘ಫುಟ್ ಪ್ರಿಂಟ್ಸ್’ - ‘ಮೂಡಿದ ಹೆಜ್ಜೆಗಳು’ ಎಂಬ ಭಾವಗೀತೆಯಲ್ಲಿ ಒಬ್ಬ ಭಕ್ತನ ಕನಸನ್ನು ಬಣ್ಣಿಸಿದ್ದಾಳೆ. ಅದು ಧ್ವನಿಪೂರ್ಣವಾಗಿದ್ದು, ಚಿಂತನಯೋಗ್ಯವಾಗಿದೆ. ಅದರ ಸಾರವಿದು :

“ಒಂದಿರುಳು, ಒಬ್ಬನು ಒಂದು ಕನಸ್ಸು ಕಂಡ : ಕಡಲ ತೀರದ ಗುಂಟ ದೇವರೊಂದಿಗೆ ತಾನು ನಡೆಯುತಿದ್ದಂತೆ ಆ ಕನಸು ! ಗಗನ ಪಟದಲ್ಲಿ ಆತನ ಜೀವನದೃಶ್ಯಗಳು ಚಲಚ್ಚಿತ್ರದಂತೆ ಮಿಂಚಾಡುತ್ತ ಗೋಚರಿಸುತ್ತಿದ್ದವು ! ಪ್ರತಿಯೊಂದು ದೃಶ್ಯದಲ್ಲೂ ಮಳಲ ಮೇಲೆ ಜತೆಜತೆಯಾಗಿರುವ ಜೋಡುಹೆಜ್ಜೆಗಳ ಸಾಲು ಗೋಚರಿಸುತ್ತಿತ್ತು. ಒಂದು ತನ್ನದು, ಇನ್ನೊಂದು ಪ್ರಭುವಿನದು.

“ತನ್ನ ಜೀವನದ ಕೊನೆಗಾಲದ ದೃಶ್ಯಗಳು ಆತನಿದಿರು ಮಿಂಚಿ ಗೋಚರಿಸಿದಾಗ, ಮಳಲ ಮೇಲೆ ಮೂಡಿದ ಹೆಜ್ಜೆಗಳತ್ತ ಹಿಂತಿರುಗಿ ನೋಡಿದನು. ಆಗ ಆತನ ಜೀವನ ಪಥದ ಗುಂಟ ಅನೇಕ ಸಲ ಆತನು ನೋಡಿದ್ದು ಒಂಟಿ ಹೆಜ್ಜೆಗಳ ಸಾಲನ್ನು ಮಾತ್ರ ! ಮತ್ತು ಆತನ ಜೀವನದ ಕೊನೆಗಾಲವು ಬಲು ದೈನ್ಯಸ್ಥಿತಿಯದೂ ಬಹು ದುಃಖಮಯವೂ ಇರುವುದನ್ನೂ ಕಂಡ.

“ಕೊನೆ ಗಾಲದ ಈ ಸಂಕಟಮಯ ದೃಶ್ಯಗಳನ್ನು ನೋಡಿದ ಆತ ತ್ರಸ್ತನಾಗಿ, ದೇವರನ್ನು ಹೀಗೆ ಪ್ರಶ್ನಿಸಿದ: ‘ದೇವರೇ, ಜೀವನದಲ್ಲಿ ನಿನ್ನನ್ನೇ ನಂಬಿ, ನಿನ್ನನ್ನೇ ಅನುಸರಿಸಿಕೊಂಡು ಹೋಗುವೆನೆಂದು ನಾನೊಮ್ಮೆ ನಿರ್ಧರಿಸಿದ ಮೇಲೆ ನೀನು ನನ್ನೊಂದಿಗೆ ಬಾಳಿನ ದಾರಿಯುದ್ದಕ್ಕೂ ನಡೆಯುತ್ತಿರುವುದಾಗಿ ನನಗೆ ವಚನ ಕೊಟ್ಟಿದ್ದೆಯಲ್ಲವೆ? ಆದರೆ, ನನ್ನ ಬಾಳಿನ ಅತ್ಯಂತ ಕಷ್ಟಕರ ಕೊನೆಗಾಲದಲ್ಲಿ, ಒಂಟಿ ಹೆಜ್ಜೆಗಳ ಸಾಲನ್ನು ಮಾತ್ರ ನಾನು ಕಂಡೆ. ನನಗೆ ಇದರರ್ಥವಾಗದು. ನೀನು ನನಗೆ ಅತ್ಯಗತ್ಯವಾಗಿ ಬೇಕಾಗಿದ್ದಾಗಲೇ ನೀನು ನನ್ನನ್ನು ತ್ಯಜಿಸಿದ್ದೇಕೆ ? ಎಂದು ಗೋಳಿಟ್ಟ.

“ಇದಕ್ಕೆ ದೇವದೇವನು ಹೀಗೆ ಉತ್ತರಿಸಿದ: ‘ಓ ನನ್ನ ಮುದ್ದು ಮಾಣಿಕವೇ’, ಅಮೂಲ್ಯ ರತ್ನವೇ, ನಾನು ನಿನ್ನನ್ನು ಸದಾ ಪ್ರೀತಿಸುತ್ತಲೇ ಇದ್ದೇನೆ. ನಿನ್ನನ್ನು ಎಂದೆಂದಿಗೂ ಕೈ ಬಿಡಲಾರೆ. ನೀನು ಬಲು ತೊಂದರೆಗೊಳಗಾಗಿ, ತುಂಬಾ ಕಷ್ಟದ ಕಾಲದಲ್ಲಿದ್ದಾಗ ನೀನು ಒಂಟಿ ಹೆಜ್ಜೆಗಳ ಸಾಲನ್ನು ಮಾತ್ರ ಕಂಡೆಯಷ್ಟೆ ? ಆಗ ನಾನು ನಿನ್ನನ್ನು ಎತ್ತಿಕೊಂಡು ನಡೆಯುತ್ತಿದ್ದೆ ! ತಿಳಿಯಿತೇ ?’ ಎಂದ. ಆಗ ಆ ಭಕ್ತ ಆನಂದ ಬಾಷ್ಪಗಳನ್ನು ಸುರಿಸುತ್ತ ಗದ್ಗದಿತನಾಗಿರಬೇಕು ! - ನಂಬಿ ನಡೆದರೆ ಭಕ್ತನನ್ನು ಭಗವಂತನೆಂದೂ ಕೈಬಿಡಲಾರ ಎಂಬ ಇಲ್ಲಿಯ ಭರವಸೆಯ ಉಕ್ತಿ ‘ನಂಬಿ ಕರೆದರೆ ಓ ಎಂಬ’ ಎಂಬ ಕನ್ನಡ ಅನುಭಾವಿಗಳ ಉಕ್ತಿಗೂ ಇತರ ಭಾರತೀಯ ಅನುಭಾವಿಗಳ ಇಂಥ ಉಕ್ತಿಗೂ ಸಂವಾದಿಯಾಗಿದೆಯಲ್ಲವೆ ?

# ರವೀಂದ್ರನಾಥ ಟಗೋರರ ಒಂದು ಭಾವಗೀತೆ

ಎಸ್.ಆರ್.ಮಳಗಿ

''ರವೀಂದ್ರನಾಥ ಟಗೋರ್'' ಅವರು ತಮ್ಮ ಒಂದು ಭಾವಗೀತೆಯಲ್ಲಿ ಭಿಕ್ಷುಕನೊಬ್ಬನ ಸ್ವಾನುಭವದ ಚಿತ್ರಣವನ್ನು ತುಂಬ ಸ್ವಾರಸ್ಯಕರವಾಗಿ ಮೂಡಿಸಿದ್ದಾರೆ. ಅದರ ಕನ್ನಡ ಗದ್ಯಾನುವಾದವಿದು: ಆ ಭಿಕ್ಷುಕ ಹೇಳುತ್ತಾನೆ! ಅಯ್ಯೋ, ಭಗವಂತನೇ, ಆ ಹಳ್ಳಿಯ ಬೀದಿಯಲ್ಲಿ ಮನೆಯಿಂದ ಮನೆಗೆ ಭಿಕ್ಷೆ ಬೇಡುತ್ತ ನಾನು ಸಾಗಿದ್ದೆ. ಆಗ ದೂರದಲ್ಲಿ ಒಂದು ಬಂಗಾರದ ರಥ ಬರುತ್ತಿರುವುದು ಕಣ್ಣಿಗೆ ಬಿತ್ತು. ಅದು ನಿನ್ನದೆ ರಥವೆಂದು ಅರಿವುಗೇಡಿಯಾದ ನನಗೆ ತಿಳಿಯಲೇ ಇಲ್ಲ. ಆ ರಥವನ್ನು ಕಂಡಾಗ ಪ್ರಜ್ವಲಿಸುವ ಭವ್ಯ ಕನಸನ್ನು ಕಂಡಂತೆ ಭಾಸವಾಯ್ತು ! ಈ ಅರಸುಗಳ ಅರಸ ಯಾರಿರಬಹುದು ? ಎಂದು ಚಕಿತನಾಗಿ ನಿಂತೆ !

''ನನ್ನ ಕೆಡುಗಾಲದ ಅಂತ್ಯ ಹತ್ತಿರ ಬಂತೆಂದು ಅಂದುಕೊಂಡೆ. ನನ್ನ ಮನೋರಥಕ್ಕೆ ಉತ್ಸಾಹವೇರಿತು. ನಾನು ಬೇಡದಿದ್ದ ವಿಪುಲವಾಗಿ ಭಿಕ್ಷೆ ದೊರೆಯುವುದೆಂದು ನಿರೀಕ್ಷಿಸುತ್ತ ನಿಂತುಕೊಂಡೆ. ದಾನ-ಧರ್ಮಗಳ ರೂಪದಲ್ಲಿ ಬೀದಿಬೀದಿಗಳಲ್ಲಿ ಎತ್ತೆತ್ತಲೂ ನೆಲದ ಧೂಳಿಯಲ್ಲೂ ಸಂಪತ್ತು ಸೂರೆಯಾಗುವುದೆಂದೂ ಭಾವಿಸಿದ್ದೆ!

''ನಾನು ನಿಂತ ಸ್ಥಳಕ್ಕೇ ರಥ ಬಂದು ನಿಂತಿತು. ನಿನ್ನ ಗಮನ ನನ್ನ ಕಡೆಗೆ ಹರಿಯಿತು. ರಥದಿಂದಿಳಿದು ನನ್ನೆಡೆಗೇ ಮುಗುಳ್ನಗುತ್ತ ನೀನು ಬಂದೆ. ನನ್ನ ಅದೃಷ್ಟ ಫಲಿಸಿತೆಂದೇ ಹರ್ಷಪುಲಕಿತನಾದೆ. ಆಗ ಒಮ್ಮೆಲೆ ನನ್ನ ಮುಂದೆ ನೀನು ನಿನ್ನ ಬಲಗೈಯೊಡ್ಡಿ, - 'ನನಗೆ ಕೊಡಬೇಕಾದುದು ನಿನ್ನಲ್ಲೇನಿದೆ ಅದನ್ನು ನನಗೆ ಕೊಡುವಿಯ ?' ಎಂದು ನನ್ನನ್ನೇ ನೀನು ಕೇಳಿದೆ ! ಆಹಾ ! ಇದೆಂಥ ತಮಾಷೆ ಅರಸರದು ? ಭಿಕ್ಷುಕನ ಮುಂದೆ ಭಿಕ್ಷೆಗಾಗಿ ಅರಸರು ಕೈಯೊಡ್ಡುವುದೇ ? ನನ್ನ ಮನಸ್ಸು ಗೊಂದಲಕ್ಕೀಡಾಯ್ತು. ಏನು ಮಾಡುವುದೆಂದು ತಿಳಿಯದೆ ನಿಂತೆ; ಅನಂತರ ಏನೋ ಹೊಳೆದು ನನ್ನ ಜೋಳಿಗೆಯಲ್ಲಿಯ ಒಂದು ಸಣ್ಣ ಕಾಳನ್ನು ತೆಗೆದು ನಿನ್ನ ಕೈಗಿತ್ತೆ.

''ಅಂದು ಸಂಜೆ, ನನ್ನ ಜೋಳಿಗೆಯ ಭಿಕ್ಷೆಯ ಕಾಳನ್ನು ನೆಲಕ್ಕೆ ಸುರುವಿದಾಗ ಆ ಸಣ್ಣ ಗುಂಪಿನಲ್ಲಿ ಬಂಗಾರದ ಒಂದು ಸಣ್ಣ ಕಾಳನ್ನು ಕಂಡು ಆಶ್ಚರ್ಯಚಕಿತನಾದೆ ! ಜೊತೆಗೇ ಬಹು ದುಃಖಿತನಾದೆ. ನೀನು ಕೇಳಿದಾಗ, ನನ್ನದೆಲ್ಲವನ್ನೂ ನಿನಗೆ ಕೊಡಲು ನನ್ನ ಮೂಢ ಹೃದಯ ಒಪ್ಪಲಿಲ್ಲವಲ್ಲ ! ಎಂದು ಹಳಹಳಿಸುತ್ತ ಅಳತೊಡಗಿದೆ''. - ಭಿಕ್ಷುಕನ ಸ್ವಪ್ನಸದೃಶ ಸ್ವಾನುಭವದ ಈ ಚಿತ್ರಣ ಚಿಂತನಯೋಗ್ಯವಾಗಿದೆಯಲ್ಲವೆ ?

# ಮಹಾಶಿವರಾತ್ರಿ

ಎಸ್.ಆರ್.ಮಳಗಿ

ಇಂದು ಮಾಘ ಬಹುಳ ಚತುರ್ದಶಿ, - ಮಹಾಶಿವರಾತ್ರಿ. ಈ ದಿನವನ್ನು ಒಂದು ಹಬ್ಬದ ದಿನವೆಂದು ಮಾತ್ರವಲ್ಲದೆ ಒಂದು ಪವಿತ್ರ ವ್ರತದ ದಿನವೆಂದು ಆಚರಿಸಲಾಗುತ್ತದೆ. ಆಸ್ತಿಕ ಹಾಗೂ ಧಾರ್ಮಿಕ ವೃತ್ತಿಯ ಹಿಂದುಗಳು ಪುರಾಣ ಕಾಲದಿಂದ ಶಿವರಾತ್ರಿ ವ್ರತವನ್ನು ಆಚರಿಸುತ್ತ ಬಂದಿದ್ದಾರೆ. ಈ ವ್ರತದಲ್ಲಿ ಪೂಜಿಸಲ್ಪಡುವ ಪ್ರಧಾನ ದೇವತೆಯೆಂದರೆ ಶಿವ, - ಮಹಾಶಿವ. 'ಶಿವ' ಎಂದರೆ ಶುಭ, ಶುಭ ಸ್ವರೂಪನೇ ಶಿವ. ಶಿವ ಪೂಜೆಯನ್ನು ಇಂದು ಭಕ್ತಿಯಿಂದ ಮತ್ತು ವಿಧಿಪೂರ್ವಕ ಮಾಡುವವರಿಗೆ ಶುಭವಾಗುವುದು ಮತ್ತು ಪುಣ್ಯ ಲಭಿಸುವುದು. ಈ ಭಾವನೆ ಒಂದು ದೃಢ ನಂಬುಗೆಯಾಗಿ ಎಲ್ಲ ಜನ - ಮನಗಳಲ್ಲಿ ಬೇರೂರಿ ಬೆಳೆಯುತ್ತ ಬಂದಿದೆ. ಇಲ್ಲಿ ಒಂದು ಮಾತನ್ನು ನೆನೆಯಬೇಕು: ಇಂದು ಶೈವ - ವೈಷ್ಣವ ಪಂಥೀಯರಲ್ಲಿ ಅದೆಷ್ಟೇ ಭೇದಭಾವವು ಕಂಡುಬರುತ್ತಿದ್ದರೂ ಮಹಾಶಿವರಾತ್ರಿಯ ಹಬ್ಬವನ್ನು ಈ ಉಭಯತರೂ ಒಮ್ಮನದ ಸಂಭ್ರಮ ಹಾಗೂ ಶಿವಭಕ್ತಿಗಳಿಂದ ಆಚರಿಸುತ್ತ ಬಂದಿದ್ದಾರೆ ! ಇದು ಕಣ್ಮನಗಳಿಗೆ ನಿಜವಾದ ಹಬ್ಬವಲ್ಲವೆ? ವಂಶಪಾರಂಪರ್ಯವಾಗಿ ಬಂದ ಇಷ್ಟ ದೇವತೆ ಯಾವುದೇ ಇರಲಿ, ಎಲ್ಲ ಮತಪಂಥೀಯರೂ ಮಹಾಶಿವರಾತ್ರಿಯ ದಿನ, ಶಿವಪೂಜೆ ಮಾಡಿ, ಹಬ್ಬದೂಟವುಂಡು, ಶಿವನಾಮ ಸ್ಮರಣೆ ಮಾಡುತ್ತ, ಸಾಯಂಕಾಲ ಶಿವದೇವಾಲಯಕ್ಕೆ ಹೋಗಿ ಶಿವಲಿಂಗ ದರ್ಶನ ಪಡೆಯದೆ ಇರರು. ಮಹಾಶಿವ ರಾತ್ರಿಯ ದಿನ ಶಿವ ದರ್ಶನ ಪಡೆಯದವನಿಗೆ ಮರಣಾನಂತರ ಕತ್ತೆಯ ಜನ್ಮ ತಪ್ಪದು ಎಂಬ ವಾಡಿಕೆಯ ಮಾತೂ ಇದೆ !

ಇದಿರಲಿ ; ಪದ್ಮಪುರಾಣದಲ್ಲಿ ಮಹಾಶಿವರಾತ್ರಿ ದಿನದ ವ್ರತಾಚರಣೆಯ ವಿವರಗಳು ಬಂದಿವೆ. ಮಹಾಶಿವರಾತ್ರಿ ವ್ರತಾಚರಣೆಯಿಂದ ಲಭಿಸುವ ಪುಣ್ಯವನ್ನೂ ಕಷ್ಟನಿವಾರಣೆಯನ್ನೂ ಅಲ್ಲಿ ಹೇಳಲಾಗಿದೆ.

ಪ್ರಾಚೀನ ಕಾಲದ ಶಿವ-ರುದ್ರ ಎಂಬ ದೇವತೆ, ಶುಭದಾಯಕ ಮತ್ತು ರೌದ್ರಕಾರಕ ಎಂಬ ಎರಡು ಮುಖಗಳನ್ನು ಹೊಂದಿದ್ದ ಕಲ್ಪನೆ, ಪುರಾಣಗಳಲ್ಲಿಯ ಉಪಖ್ಯಾನಗಳಲ್ಲಿ ಪುಷ್ಟಿಗೊಂಡು ಬೆಳೆದಿದೆ. ಶಿವರಾತ್ರಿ-ವ್ರತಾಚರಣೆ ಮಾಡುವ ಧಾರ್ಮಿಕರಿಗೆ, ಎಲ್ಲ ಬಗೆಯ ಶುಭಗಳನ್ನೂ, ಮಾಡದ ಅಧಾರ್ಮಿಕರಿಗೆ, ಎಲ್ಲ ಬಗೆಯ ಕಷ್ಟ ಪರಂಪರೆಯನ್ನೂ ಒದಗಿಸಿದಂತೆ, ಬಗೆಬಗೆಯ ಕಥೆಗಳನ್ನು ಹೇಳಲಾಗಿದೆ.

ಪ್ರಾಚೀನಕಾಲದ ಭಾರತದ ನೈಮಿಷಾರಣ್ಯದಲ್ಲಿಯ, ಶೌನಕಾದಿ ತಪೋಧನರಿಗೆ ಪುರಾಣಿಕ ಸೂತ ಮುನಿಯು ಶಿವರಾತ್ರಿ ವ್ರತದ ವಿಧಾನ ಹಾಗೂ ಮಹಿಮೆಗಳನ್ನು ವಿವರಿಸುತ್ತಾನೆ : ಶಿವರಾತ್ರಿ ವ್ರತ ಧಾರಿಯು ಮಾಘಬಹುಳಚತುರ್ದಶಿಯಂದು, ಶಿವಪೂಜಾ ದೀಕ್ಷೆಹೊಂದಿ, ಅಂದು ಹಗಲಿರುಳು ನಿರಾಹಾರಿಯಾಗಿರಬೇಕು. ನೆಲ್ಲಿಕಾಯಿ ಗಾತ್ರದ ಬೆಳ್ಳಿಯ ಶಿವಲಿಂಗವನ್ನು ಪ್ರತಿಷ್ಠಾಪಿಸಿ, ವಿಧಿಪೂರ್ವಕ ಪೂಜೆ ಸಲ್ಲಿಸಿ, ಅಂದು ರಾತ್ರಿ ಶಿವಪುರಾಣ ಶ್ರವಣ ಮಾಡುತ್ತ ಜಾಗರಣ ಮಾಡಬೇಕು. ಮರುದಿನ ಅಮಾವಾಸ್ಯೆಯಂದು ಮತ್ತೆ ಹಾಗೆಯೇ ವಿಧಿವತ್ತಾಗಿ ಶಿವಲಿಂಗ ಪೂಜೆ ಮಾಡಿ, ಆ ಲಿಂಗವನ್ನು ಪೂಜೆಮಾಡಿಸಿದ

ಪೂಜ್ಯರಿಗೆ ದಾನಮಾಡಬೇಕು. ಪೂಜ್ಯರನ್ನು ಸುಮಂಗಲೆಯರನ್ನು ಮೃಷ್ಟಾನ್ನ ಭೋಜನ, ದಾನ, ದಕ್ಷಿಣೆಗಳಿಂದ ತೃಪ್ತಿಪಡಿಸಬೇಕು. ಹೀಗೆ ಆರಂಭವಾದ ವ್ರತವನ್ನು ಅನಂತರ, ಪ್ರತಿ ಮಾಸದ ಉಭಯ ಪಕ್ಷಗಳ ಚತುರ್ದಶಿಯಂದು ಆಚರಿಸುತ್ತ ಹನ್ನೊಂದು ವರ್ಷಗಳವರೆಗೆ ಮಾಡಿ, ಕೊನೆಗೆ ಉದ್ಯಾಪನೆಯನ್ನು ಸಾಂಗಗೊಳಿಸಬೇಕು. ಈ ವ್ರತಾಚರಣೆಯಿಂದ ಶಾಶ್ವತ ಪುಣ್ಯ, ಪುತ್ರಸಂಪತ್ತು, ದೀರ್ಘಾಯುರಾರೋಗ್ಯ ಲಬಿಸುವವು ಎನ್ನುತ್ತಾನೆ.

ಅನಂತರ, ಆ ಸೂತ ಮುನಿಯು, ಆ ಶೌನಕಾದಿ ತಪೋಧನರಿಗೆ, ಶಿವರಾತ್ರಿ ವ್ರತದ ಮಹಿಮೆಯ ಕಥೆಗಳನ್ನು ಹೇಳುತ್ತಾನೆ: ಅವುಗಳಲ್ಲಿ ಕಾಳಿಕಾನಗರದ ಶಿವಪಾದನೆಂಬ ಕಡುಬಡವನ ಕಥೆಯೊಂದಿದೆ. ಆತನು ಶಿವರಾತ್ರಿಯ ವ್ರತಾಚರಣೆಯಿಂದ ತನ್ನ ಬಡತನವನ್ನು ನೀಗಿ, ಧನವಂತನಾಗಿ, ಹೆಂಡತಿ ಮಕ್ಕಳೊಂದಿಗೆ ಸುಖಜೀವನ ನಡೆಸಿ, ಮುಕ್ತಿ ಪಡೆದ ಕಥೆಯದು ! ಇನ್ನು, 'ಶಿವಲೀಲಾಮೃತ'ದಲ್ಲಿ ಕ್ರೂರ ಬೇಟೆಗಾರನೊಬ್ಬನ ಕಥೆ ಬಂದಿದೆ. ಕಾರಣಾಂತರಗಳಿಂದ ಹರಿಣಿಯ ರೂಪ ಧರಿಸಿದ್ದ ರಂಬೆಯ ಬೋಧೆಯಿಂದ ಆ ಬೇಟೆಗಾರನು ಶಿವರಾತ್ರಿವ್ರತದ ಮಹಿಮೆಯರಿತು, ಸಜ್ಜನನಾಗಿ ಪರಿವರ್ತನಗೊಂಡ ಕಥೆಯದು.

ಮಹಾಶಿವರಾತ್ರಿಯ ವ್ರತಾಚರಣೆ ಭರತ ಖಂಡದ ತುಂಬ ಬಳಕೆಯಲ್ಲಿದೆ. ಭಾರತದಲ್ಲಿ, ಹನ್ನೆರಡು ಜ್ಯೋತಿರ್ಲಿಂಗಗಳಿದ್ದು, ಅಲ್ಲಿ ಶಿವರಾತ್ರಿಯ ದಿನ ಮಹಾಭಿಷೇಕಾದಿ ಪವಿತ್ರ ಕಾರ್ಯಗಳು ಎಂದಿನಿಂದಲೂ ನಡೆಯುತ್ತ ಬಂದಿವೆ. ಈ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಮಹಾ ಕಾಲೇಶ್ವರ ಲಿಂಗದ ಪರಮ ಭಕ್ತನಾಗಿದ್ದ ಉಜ್ಜಯಿನಿಯ ಚಂದ್ರಸೇನ ಮಹಾರಾಜನ ಕಥೆಯೊಂದಿದೆ. ಆತನು ತನ್ನ ಶಿವಭಕ್ತಿಯ ಪ್ರಭಾವದಿಂದ ಶತ್ರುದಾಳಿಗಳನ್ನು ಯಶಸ್ವಿಯಾಗಿ ಎದುರಿಸಿದ. ಅಷ್ಟೇ ಅಲ್ಲ, ಶಿವಭಕ್ತಿಯ ಮಹಿಮೆಯಿಂದ ಆ ವೈರಿಗಳೂ ಪರಿವರ್ತನ ಹೊಂದಿದರು.

ಶಿವರಾತ್ರಿ ಮಹಿಮೆಯ ಇಂಥ ಕಥೆಗಳು ಹಲವಾರಿವೆ. ಅವು ಭಕ್ತರ ಪ್ರಾಮಾಣಿಕ ಭಕ್ತಿ-ಶ್ರದ್ಧೆಗಳ ಮಹಿಮೆಗೂ ಸಾಕ್ಷಿಯಾಗಿವೆ! ಇದು ನಾವಿಂದು ಗಮನಿಸಬೇಕಾದ ಮುಖ್ಯ ಸಂಗತಿ !

15-01-1995

# ಕೋಟ ಶಿವರಾಮ ಕಾರಂತ

## (ಜನ್ಮ ಶತಾಬ್ಧಿ ಸಂದರ್ಭದಲ್ಲಿ)

ಎಸ್.ಆರ್.ಮಳಗಿ

ಕೋಟ ಶಿವರಾಮ ಕಾರಂತರು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಒಂದು ಅನರ್ಘ್ಯರತ್ನ. ಅವರು ಕನ್ನಡ ಸಾಹಿತ್ಯದಲ್ಲಿ ನಡೆಸುತ್ತ ಬಂದ ಕೃಷಿಯ ಮೊತ್ತ ಕನ್ನಡಕ್ಕೆ ಅವರಿತ್ತ ಬಹು ದೊಡ್ಡ ಕೊಡುಗೆ. ಅವರದು ಬಹುಶ್ರುತತ್ವ ಮತ್ತು ಬಹುಮುಖ ವ್ಯಕ್ತಿತ್ವ. ಸುಮಾರು ಮೂವತ್ತು ಬೆಲೆಯುಳ್ಳ ಕಾದಂಬರಿಗಳನ್ನು ರಚಿಸಿದ ಇವರು ಕನ್ನಡ ಕಾದಂಬರಿಕಾರರಲ್ಲಿ ಅಗ್ರೇಸರರು. ಇವರ ಕಾದಂಬರಿಗಳ ವಸ್ತು ಕೌಟುಂಬಿಕ ಮತ್ತು ಸಾಮಾಜಿಕ, ವಾಸ್ತವ ಚಿತ್ರಣವೇ ಇವುಗಳ ಪ್ರಧಾನ ಲಕ್ಷಣ. ಜೀವನದ ಕಷ್ಟ, ಸುಖ, ನೋವು - ನಲಿವು, ಸೋಲು - ಗೆಲುವುಗಳನ್ನು ನಿರ್ಲಿಪ್ತ ದೃಷ್ಟಿಯಿಂದ ಚಿತ್ರಿಸಿದ್ದಾರೆ. ಜೀವನವನ್ನು ಎದುರಿಸಬೇಕು, ಸತ್ಯ ಪಥದಲ್ಲಿ ಶಿಸ್ತಿನಿಂದ ನಡೆಯಬೇಕು, ಬಾಳಿಬದುಕಬೇಕು ಎಂಬುದೇ ಅವರು ನೀಡುವ ಸಂದೇಶ. ಬೇರಾರ ಅನುಸರಣೆ, ಅನುಕರಣೆ ಅವರಿಗೆ ಸಲ್ಲದ್ದು. ಸ್ವಂತದೃಷ್ಟಿಗೆ ತೋರಿದಂತೆ ಬಾಳುವ ರೀತಿ - ನೀತಿಗಳ ಒರೆಗಲ್ಲೆ ಅವರದು. ಪಾಶ್ಚಾತ್ಯ ಸಾಹಿತ್ಯ ತತ್ವಗಳ ಅನುಕರಣೆಯ ಗೀಳು ಅವರಿಗಿಲ್ಲ. ಕಡಲ ಕರೆಯ ಹಾಗೂ ಮಲೆನಾಡಿನ ಜನ ಜೀವನವನ್ನು ಬಲು ಸೂಕ್ಷ್ಮವಾಗಿ ಪರಿಶೀಲಿಸಿ ತಮಗೆ ತೋಚಿದಂತೆ ಪಾತ್ರಗಳನ್ನೂ ಸನ್ನಿವೇಶಗಳನ್ನೂ ಚಿತ್ರಿಸಿದ್ದಾರೆ. ಪ್ರತಿಯೊಂದು ಕಾದಂಬರಿಯಲ್ಲೂ ಒಂದೊಂದು ಹೊಸಬಗೆಯ ಕಲಾತಂತ್ರದ ಪ್ರಯೋಗ ನಡೆಸಿದ್ದಾರೆ.

ಸ್ವತಂತ್ರ ದೃಷ್ಟಿಯ ಮುಕ್ತ ಮನಸ್ಸಿನ ಕಾರಂತರನ್ನು 'ಕಡಲಕರೆಯ ಭಾರ್ಗವ' ಎಂದು ಜನ ಕರೆಯುತ್ತಿದ್ದರು. ಸರ್ಕಾರ ಇಲ್ಲವೆ ಇತರ ಯಾವುದೇ ಸಂಘ-ಸಂಸ್ಥೆಗಳು ಕೊಟ್ಟ ಪದವಿ-ಪ್ರಶಸ್ತಿಗಳಿಗಿಂತ ಮೊದಲೇ ಜನತೆ ಅವರ ಧೀಮಂತ, ಧೀರ ವ್ಯಕ್ತಿತ್ವವನ್ನು ಗುರುತಿಸಿ ಕೊಟ್ಟ ಅತ್ಯುಚಿತ ಪ್ರಶಸ್ತಿಯಿದು. ಅವರ ಬರೆವಣಿಗೆಯಾಗಲಿ ಜೀವನವಾಗಲಿ ಸ್ವಯಂಸ್ಫೂರ್ತಿಯಿಂದ ನಡೆದುದು.

ಅವರ ಕಾದಂಬರಿಗಳಲ್ಲಿ ಎದ್ದುಕಾಣುವ ಅಂಶವೆಂದರೆ ಪ್ರಾದೇಶಿಕತೆ. ತಾವು ನೆಲೆಸಿದ್ದ ಪ್ರದೇಶದಲ್ಲಿಯ ಜನಜೀವನದ ವಿಶಿಷ್ಟ ಮುಖಗಳನ್ನು ಅತ್ಯುತ್ಕಟ ರೀತಿಯಲ್ಲಿ ಕಂಡರಿಸಿದ್ದಾರೆ. ದಕ್ಷಿಣಕನ್ನಡ ಜಿಲ್ಲೆಯ ಜನಜೀವನದ ಸಮಸ್ಯೆಗಳ ಪರಿಚಯ ಇವರ ಕಾದಂಬರಿಗಳ ಮೂಲಕವೇ ಇತರ ಭಾಗಗಳ ಕನ್ನಡಿಗರಿಗೆ ಸ್ಫುಟವಾದುದು.

ಕಾರಂತರದು ಬಹುಮುಖ ಪ್ರತಿಭೆ. ಹಲವು ಪ್ರಕಾರದ ನಾಟಕಗಳನ್ನೂ ರಚಿಸಿದ್ದಾರೆ. 'ಗರ್ಭಗುಡಿ', 'ಬಿತ್ತಿದ ಬೆಳೆ' ಇವು ದೊಡ್ಡ ನಾಟಕಗಳು. 'ಹೇಗಾದರೇನು', 'ಜಂಬದ ಜಾನಕಿ', 'ಗೀತನಾಟಕಗಳು', ನವೀನ ನಾಟಕಗಳು' - ಇವುಗಳಲ್ಲಿ ಏಕಾಂಕಗಳು ಪ್ರಕಟವಾಗಿವೆ. ಹಾಸ್ಯ ವಿಡಂಬನೆಯ ಸಾಧನದಿಂದ ಇಂದಿನ ಸಮಾಜವನ್ನು ಕಟುವಿಮರ್ಶೆಗೆ ಒಳಪಡಿಸಿದ್ದಾರೆ. 'ಯಾರೋ ಅಂದರು', 'ಮುಕ್ತದ್ವಾರ' ಇವು ಉತ್ತಮ

ಏಕಾಂಕಗಳು. ನಾಟಕಗಳಲ್ಲಿ ಪದ್ಯನಾಟಕ, ಗೀತನಾಟಕ, ಛಾಯಾನಾಟಕ ಇತ್ಯಾದಿ ಪ್ರಯೋಗಗಳನ್ನು ಕಾರಂತರು ಮಾಡಿದ್ದಾರೆ. ಹಾಸ್ಯ ವಿಡಂಬನೆಗಳುಳ್ಳ ಪ್ರಬಂಧ ರಚನೆಯಲ್ಲೂ ಕಾರಂತರು ಪಳಗಿದವರು. ಇವುಗಳಲ್ಲಿ ಕೊಂಕುನುಡಿ, ಚುಚ್ಚುನುಡಿಗಳಿಂದ ಸಮಾಜದಲ್ಲಿಯ ವಿಕ್ಷಿಪ್ತ ಸಂಪ್ರದಾಯ-ಪದ್ಧತಿಗಳನ್ನು ನಗೆಗೀಡುಮಾಡಿದ್ದಾರೆ. ಕಾರಂತರ 'ಅಪೂರ್ವಪಶ್ಚಿಮ' 'ಅಬುವಿನಿಂದ ಬರಾಮಕ್ಕೆ' ಎಂಬವು ಪ್ರವಾಸ ಸಾಹಿತ್ಯಕ್ಕೆ ನೀಡಿದ ಕಾಣಿಕೆಗಳು. 'ಹುಚ್ಚುಮನಸ್ಸಿನ ಹತ್ತುಮುಖ'ವು ಕಾರಂತರ ಆತ್ಮಚರಿತ್ರೆ. 'ಬಾಳ್ವೆಯೆ-ಬೆಳಕು' ಪ್ರೌಢಚಿಂತನಶೀಲ ಪ್ರಬಂಧ. ಕನ್ನಡದಲ್ಲಿ ವಿಶ್ವಕೋಶ ರಚನೆಗೆ ಕೈಹಾಕಿ ವೈಯಕ್ತಿಕ ಸಾಹಸವನ್ನು ಮೊಟ್ಟಮೊದಲು ಮೆರೆದವರು ಕಾರಂತರು. 'ಬಾಲಪ್ರಪಂಚ', 'ವಿಜ್ಞಾನ ಪ್ರಪಂಚ'ದ ಸಂಪುಟಗಳು ಕಾರಂತರ ಹಿಂಗದ ಕಾರ್ಯೋತ್ಸಾಹಕ್ಕೆ ಸಾಕ್ಷಿ. ಇವರ 'ಯಕ್ಷಗಾನ ಬಯಲಾಟ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತರೆ, 'ಮೂಕಜ್ಜಿಯ ಕನಸುಗಳು' ಕಾದಂಬರಿಗೆ ಜ್ಞಾನಪೀಠ ಪ್ರಶಸ್ತಿ ದೊರೆತಿದೆ. ಇಂಥ ಬಹುಶ್ರುತ, ಬಹುಮುಖವ್ಯಕ್ತಿತ್ವದ ಕಾರಂತರನ್ನು ಗುರುದೇವ ರವೀಂದ್ರನಾಥ ಟಗೋರರಿಗೆ ನನ್ನ ಮಿತ್ರರೊಬ್ಬರು ಹೋಲಿಸಿದ್ದು ಕೆಲಮಟ್ಟಿಗಾದರೂ ಸೂಕ್ತವಲ್ಲವೆ ?

# ಕನ್ನಡ ಸಾಹಿತ್ಯ ಚರಿತ್ರೆ

## (ಒಂದು ಸಮೀಕ್ಷೆ)

ಎಸ್.ಆರ್. ಮಳಗಿ

### 1. ಐತಿಹಾಸಿಕ ಸಮೀಕ್ಷೆ :

**ಸಾಹಿತ್ಯಾರಂಭ :**

ಪ್ರಾಚೀನತೆಯ ಕ್ರಮದಲ್ಲಿ ಸಂಸ್ಕೃತ ಪ್ರಾಕೃತ ಸಾಹಿತ್ಯಗಳ ತರುವಾಯ ತಮಿಳು ಸಾಹಿತ್ಯ ಮತ್ತು ಅನಂತರದಲ್ಲಿ ಕನ್ನಡ ಸಾಹಿತ್ಯ ಬರುತ್ತವೆಂದು ವಿದ್ವಾಂಸರ ಅಭಿಪ್ರಾಯ. ಕನ್ನಡ ಸಾಹಿತ್ಯಕ್ಕೆ ಸುಮಾರು ಒಂದೂವರೆ ಸಾವಿರ ವರುಷಗಳ ನಿರಂತರ ಹಾಗೂ ಖಚಿತ ಇತಿಹಾಸವಿದೆ. ಈ ಕಾಲಾವಧಿಯಲ್ಲಿ ಆಗಿ ಹೋದ ಗ್ರಂಥಕಾರರ ಸಂಖ್ಯೆ ಕರ್ನಾಟಕ ಕವಿಚರತೆಯ ಪ್ರಕಾರ 1148 ಎಂದಿದ್ದರೂ ಈ ಸಂಖ್ಯೆ 1200ನ್ನೂ ಮಿಕ್ಕಿದೆಯೆಂದು ಇತ್ತೀಚಿನ ಸಂಶೋಧನೆಗಳಿಂದ ತಿಳಿದು ಬಂದಿದೆ. ಮತ್ತು ಈ ಗ್ರಂಥಕಾರರ ಕೃತಿಗಳ ಸಂಖ್ಯೆ ಎಷ್ಟೆಂಬುದು ತಿಳಿದಿಲ್ಲವಾದರೂ ಇವುಗಳ ರಾಶಿಯೂ ದೊಡ್ಡದು. ಕನ್ನಡ ಜನತೆಯ ವಿಶಿಷ್ಟ ಸಂಸ್ಕೃತಿಯ ಭವ್ಯ ಚರಿತ್ರೆಯೇ ಆಗಿರುವ ಕನ್ನಡ ಸಾಹಿತ್ಯ ಸಂಪದ್ಭರಿತವಾಗಿದೆ.

ಕನ್ನಡದ ಪ್ರಾಚೀನ ಶಿಲಾ ಲಿಪಿಗಳಲ್ಲಿ ಮೊಟ್ಟ ಮೊದಲನೆಯದೆಂದರೆ ಕ್ರಿ.ಶ. 450ರ ಹಲ್ಮಿಡಿ ಶಾಸನ. ಇದಕ್ಕೂ ಪೂರ್ವದ ಕನ್ನಡ ಶಾಸನಗಳೆಲ್ಲ ಸಂಸ್ಕೃತ ಇಲ್ಲವೆ ಪ್ರಾಕೃತ ಭಾಷೆಯಲ್ಲಿವೆ. ಮೈಸೂರು ರಾಜ್ಯದ ಕೊಪ್ಪಳ ಮತ್ತು ಮಾಸ್ಕಿ ಪ್ರದೇಶಗಳಲ್ಲಿ ದೊರೆತ ಕ್ರಿ.ಪೂ. 3ನೆಯ ಶತಕದ ಅಶೋಕನ ಬಂಡೆ ಬರೆಹಗಳಿಂದ ಕನ್ನಡ ನಾಡಿನಲ್ಲಿ ಆಗಲೇ ಬೌದ್ಧ ಮತ ಪ್ರಸಾರವಾದುದು ತಿಳಿದು ಬರುತ್ತಿದೆ. ಅನಂತರದಲ್ಲಿ ಕನ್ನಡ ನಾಡಿಗೆ ಬಂದ ಅಶೋಕನ ಮೊಮ್ಮಗ ಮೌರ್ಯ ಸಾಮ್ರಾಟ ಸಂಪ್ರತಿ ಚಂದ್ರಗುಪ್ತ ಮತ್ತು ಆತನ ಗುರು ಭದ್ರಬಾಹು ಮುನಿಗಳ ಪ್ರಭಾವದಿಂದ ಜೈನ ಮತ ಪ್ರಚಾರವೂ ಆರಂಭವಾಯಿತು. ದಕ್ಷಿಣದ ಭಾಷೆಗಳು ಬ್ರಾಹ್ಮೀ ಲಿಪಿಯನ್ನು ಸ್ವೀಕರಿಸಿದುದಕ್ಕೆ ಬೌದ್ಧ ಮತ ಪ್ರಚಾರವೇ ಕಾರಣವಾಗಿರಬೇಕು. ಆದರೆ ಬೌದ್ಧರಿಂದ ಕನ್ನಡ ಸಾಹಿತ್ಯ ರಚನೆ ಆದಂತಿಲ್ಲ. ಜೈನರಿಂದ ಕನ್ನಡ ಸಾಹಿತ್ಯಾರಂಭವಾದುದು ಮಾತ್ರ ಸುಸ್ಪಷ್ಟವಿದೆ. ಸಮಂತ ಭದ್ರ, ಕವಿ ಪರಮೇಷ್ಠಿ, ಪೂಜ್ಯಪಾದ, ಕೊಂಡಕುಂದಾಚಾರ್ಯ, ವಿಮಲಸೂರಿ, ರವಿಷೇಣ, ಜಿನಸೇನರೇ ಮೊದಲಾದ ಜೈನ ಪಂಡಿತರು ಆರಂಭದ ಕನ್ನಡದ ಜೈನ ಕವಿಗಳ ಮೇಲೆ ಗಾಢ ಪ್ರಭಾವ ಬೀರಿರಬೇಕು. ಪ್ರಾಕೃತದ ಬೃಹತ್ಕಥೆ - ಗಾಥಾಸಪ್ತ ಶತಿಗಳು ಕನ್ನಡ ಕವಿಗಳಿಗೆ ಕಾವ್ಯದ ಖನಿಗಳೇ ಆಗಿದ್ದವು. ಹಾಗೆಯೆ ಭಾಸ, ಕಾಳಿದಾಸ, ಮಾಘ, ಬಾಣ ಭಟ್ಟ, ಭಾರವಿ, ಭಟ್ಟ ನಾರಾಯಣಾದಿ ಸಂಸ್ಕೃತ ಕವಿಗಳ ಪ್ರೌಢ ಕೃತಿಗಳೂ ಪ್ರಾಚೀನ ಕನ್ನಡದ ಆರಂಭದ ಕವಿಗಳಿಗೆ ಅನುಕರಣೀಯ ಮಾದರಿಗಳನ್ನೊದಗಿಸಿದವು.

ಹಲ್ಮಿಡಿ ಶಾಸನವು 5ನೆಯ ಶತಕದ ಕನ್ನಡ ಸಾಹಿತ್ಯ ಭಾಷೆಯ ಸ್ವರೂಪವನ್ನು ಎತ್ತಿ ತೋರಿಸುವ ಉತ್ತಮ ನಿದರ್ಶನವಾಗಿದೆ. ಅಲ್ಲಿಯ ಭಾಷಾ ಶೈಲಿ ಸಂಸ್ಕೃತಮಯ. ಅಲ್ಲದೆ ಪೂರ್ವದ ಹಳಗನ್ನಡವು, ಹಳಗನ್ನಡದ ಅವಸ್ಥೆಯತ್ತ ತಿರುಗುತ್ತಿದ್ದ ಗುರುತುಗಳು ಈ ಶಾಸನದ ಒಂದು ವೈಶಿಷ್ಟ್ಯ. ಸಾಹಿತ್ಯ ದೃಷ್ಟಿಯಿಂದ

ಉತ್ತಮವೆನಿಸುವ ಶಾಸನಗಳು ಹಲ್ಮಿಡಿ ಶಾಸನದ ಅನಂತರದವೇ ಎನ್ನಬೇಕು. ಇವುಗಳಲ್ಲಿ ತಮಟಕಲ್ಲಿನ ಶಾಸನ (ಸು. 500) ದಲ್ಲಿ ಬರುವ ಗುಣಮಧುರನೆಂಬೊಬ್ಬನ ಗುಣಗಾನವಿರುವ ಪದ್ಯ 7ನೆಯ ಶತಕದ ಬಾದಾಮಿಯ ಶಾಸನದ ಕಪ್ಪೆ ಅರೆಭಟ್ಟನನ್ನು ಕುರಿತ ಮೂರು ತ್ರಿಪದಿಗಳು ಸಾಲಂಕೃತ ಕಾವ್ಯಮಯವಾಗಿದ್ದು ಎಲ್ಲರ ಮೆಚ್ಚಿಕೆ ಪಡೆದಿವೆ. ಸುಮಾರು ಇದೇ ಕಾಲದ ಶ್ರವಣಬೆಳ್ಗೊಳದ ಶಾಸನ ಪದ್ಯಗಳೂ ಶಾಂತರಸಕ್ಕೆ ಉದಾಹರಣೆಗಳೆನಿಸಿವೆ.

ಕನ್ನಡದ ಮೊಟ್ಟ ಮೊದಲನೆಯ ಉಪಲಬ್ಧ ಗ್ರಂಥವು ಕವಿರಾಜ ಮಾರ್ಗ (ಸು.850). ಈ ಗ್ರಂಥದ ಕರ್ತೃತ್ವವು ವಾದಗ್ರಸ್ತವಾಗಿದೆ. ರಾಷ್ಟ್ರಕೂಟ ರಾಜ ನೃಪತುಂಗ (ಕ್ರಿ.ಶ. 814-822)ನ ಆಶ್ರಿತನಾಗಿದ್ದ ಜಯಾಳ್ವನೋ ಶ್ರೀ ವಿಜಯನೋ ಈ ಗ್ರಂಥದ ಕರ್ತೃವಿದ್ದಿರಬೇಕೆಂದು ಪಂಡಿತರ ಮತ. ಕವಿರಾಜ ಮಾರ್ಗದಲ್ಲಿ ಕೆಲವು ಪ್ರಾಚೀನ ಪದ್ಯಕಾರರ ಮತ್ತು ಗದ್ಯಕಾರರ ಹೆಸರುಗಳು ಉಕ್ತವಾಗಿದೆ. ಕಂದ, ವೃತ್ತ, ಜಾತಿಗಳಂಥ ಛಂದೋ ರೂಪಗಳುಳ್ಳ ಚತ್ತಾಣ, ಬೆದಂಡೆ ಎಂಬ ಸಾಹಿತ್ಯ ಪ್ರಕಾರಗಳೂ ಇಲ್ಲಿ ಉಲ್ಲೇಖಗೊಂಡಿವೆ. ಗದ್ಯಕಾರರಲ್ಲಿ ಉಕ್ತನಾಗಿರುವ ದುರ್ವಿನೀತನು ಕ್ರಿ.ಶ. 6ನೆಯ ಶತಕದ ಗಂಗರಾಜ. ಈತನು ಸಂಸ್ಕೃತದ ಖ್ಯಾತ ಕವಿ ಭಾರವಿಗೆ ಆಶ್ರಯದಾತನಾಗಿದ್ದು ಆತನ ಕಿರಾತಾರ್ಜುನೀಯ ಕಾವ್ಯದ 15ನೆಯ ಸರ್ಗಕ್ಕೆ ಟೀಕೆ ಬರೆದನೆಂದು ಗಂಗರ ಶಾಸನಗಳು ಹೇಳುತ್ತವೆ. ಅಲ್ಲದೆ, ಈ ರಾಜನು ಪಾಣಿನಿಯ ವ್ಯಾಕರಣಕ್ಕೆ ಶಬ್ದಾವತಾರವೆಂಬ ವ್ಯಾಖ್ಯಾನವನ್ನು ಬರೆದನಲ್ಲದೆ ಗುಣಾಢ್ಯನ ಬೃಹತ್ಕಥೆಯನ್ನು ಪೈಶಾಚೀ ಭಾಷೆಯಿಂದ ಸಂಸ್ಕೃತಕ್ಕೆ ಪರಿವರ್ತಿಸಿದ. ಕವಿರಾಜಮಾರ್ಗಕಾರನ ಹೇಳಿಕೆಯಂತೆ ಈತನು ಕನ್ನಡದಲ್ಲೂ ಗದ್ಯದ ರಚನೆ ಮಾಡಿರಬೇಕು. ಕವಿರಾಜಮಾರ್ಗದ ಪ್ರೌಢ ಶೈಲಿಯಿಂದಲೂ ಅಲಂಕಾರ ಶಾಸ್ತ್ರ ವಿಷಯದ ಪ್ರತಿಪಾದನೆಯಿಂದಲೂ ಈ ಗ್ರಂಥಕ್ಕಿಂತ ಮೊದಲು ನಾಲ್ಕೈದು ಶತಮಾನಗಳಿಂದ ಕನ್ನಡ ಸಾಹಿತ್ಯ ಹುಟ್ಟಿ ಬೆಳೆದು ಬಂದಿರಬೇಕೆಂಬಲ್ಲಿ ಸಂದೇಹವಿಲ್ಲ. ಆದಿಕವಿ ಪಂಪನು (ಕ್ರಿ.ಶ.941) ತನ್ನ ಎರಡು ಕಾವ್ಯಗಳು ಹಿಂದಿನ ಕಾವ್ಯಗಳನ್ನೆಲ್ಲ ಹಿಮ್ಮೆಟ್ಟಿಸಿದವೆಂದು ಹೇಳಿಕೊಂಡಿದ್ದಾನೆ. ಈ ಹಿಂದಿನ ಕಾವ್ಯಗಳಾವುವೆಂಬುದು ತಿಳಿಯದಿದ್ದರೂ ಈ ಹಿಂದೆ ಪ್ರಚುರವಾಗಿದ್ದ ಕನ್ನಡ ಕವಿ ಕೃತಿಗಳ ಉಲ್ಲೇಖಗಳು ಕೆಲವು ಗ್ರಂಥಗಳಲ್ಲಿ ದೊರೆತಿವೆ. ಜೈನ ತತ್ವಗಳ ವ್ಯಾಖ್ಯಾನ ರೂಪವಾದ ಚೂಡಾಮಣಿ ಎಂಬ 96000 ಗ್ರಂಥ (36 ಅಕ್ಷರಗಳ ಮೊತ್ತ) ಗಳುಳ್ಳ ಬೃಹದ್ ಗ್ರಂಥವು ತುಂಬುಲೂರಾಚಾರ್ಯನಿಂದ 7ನೆಯ ಶತಕದಲ್ಲಿಯೇ ರಚಿತವಾಯ್ತೆಂದೂ ತಿಳಿದುಬಂದಿದೆ. ಸುಮಾರು ಇದೇ ಕಾಲದಲ್ಲಿ ರಚಿತವಾದುದು ಶ್ಯಾಮಕುಂದಾಚಾರ್ಯರ ಪ್ರಾಭೃತವೆಂಬ ಜೈನ ತತ್ವಗಳ ಕನ್ನಡ ಗ್ರಂಥ ಮತ್ತು ಸೈಗೊಟ್ಟ ಶಿವಮಾರ (ಸು.800) ನೆಂಬ ಗಂಗರಾಜನು ಗಜಾಷ್ಟಕವೆಂಬ ಚಿಕ್ಕ ಕಾವ್ಯವನ್ನು ರಚಿಸಿದ್ದಾಗಿ ತಿಳಿದಿದೆ. ಅದು ಓವನಿಕೆ ಒನಕೆವಾಡು (ಬೀಸು ಕುಟ್ಟುವ ಹಾಡು) ಎಂಬುದಾಗಿ ಜನ ಮೆಚ್ಚಿಕೆ ಪಡೆದಿತ್ತು. ಕರ್ಣಾಟಕ ಕುಮಾರ ಸಂಭವ ಕರ್ಣಾಟಕ ಮಾಳತೀ ಮಾಧವ ಎಂಬವು ಸಂಸ್ಕೃತದಿಂದ ಕನ್ನಡಕ್ಕೆ ತರ್ಜುಮೆಗೊಂಡ ಕೃತಿಗಳಿರಬೇಕೆಂದು ಕೆಲವರ ಮತ. ಗುಣಗಾಂಕೀಯವೆಂಬ ಛಂದೋ ಗ್ರಂಥವೂ ಕನ್ನಡದಲ್ಲಿತ್ತೆಂದು ತಿಳಿದು ಬಂದಿದೆ.

9ನೆಯ ಶತಮಾನದಲ್ಲಿ ಕವಿರಾಜ ಮಾರ್ಗಕಾರನ ಸಮಕಾಲೀನರೆನಿಸಿದ್ದ ಖ್ಯಾತ ಕವಿಗಳೆಂದರೆ ಅಸಗ,

ಗುಣನಂದಿ ಮತ್ತು ಮೊದಲನೆಯ ಗುಣವರ್ಮ. ಈ ಮೊದಲು ಉಕ್ತವಾಗಿರುವ ಕರ್ಣಾಟಕ ಕುಮಾರ ಸಂಭವವು ಅಸಗನ ಕೃತಿಯಿರಬೇಕೆಂದು ತಿಳಿಯಲಾಗಿದೆ. ಗುಣ ನಂದಿಯ ಕೃತಿಗಳಾವುವೂ ದೊರೆತಿಲ್ಲ. ಭಗವಾನ್ ಗುಣ ನಂದಿ ಎಂದು ಹೆಸರಾಗಿದ್ದ ಕವಿಯೀತ. ಮೊದಲನೆಯ ಗುಣವರ್ಮನು ಹರಿವಂಶ ಮತ್ತು ಶೂದ್ರಕ ಎಂಬೆರಡು ಚಂಪೂ ಕಾವ್ಯಗಳ ಕರ್ತೃವೆಂದು ಹೇಳಲಾಗುತ್ತದೆ. ಆದಿ ಪಂಪ (ಸು.940)ನಿಗಿಂತ ಮುಂಚೆ ಸುಮಾರು 100 ವರುಷಗಳಿಂದಲೇ ಗದ್ಯ ಪದ್ಯ ಮಿಶ್ರವಾದ ಚಂಪೂ ಕಾವ್ಯ ಪರಂಪರೆಗೆ ಪೋಷಣೆ ನೀಡಿದ ಕವಿಗಳಲ್ಲಿ ಮೊದಲನೆಯ ಗುಣವರ್ಮನೂ ಒಬ್ಬನಾಗಿರಬೇಕು.

ಕವಿರಾಜಮಾರ್ಗ ಮತ್ತು ಪ್ರಾಚೀನ ಕನ್ನಡ ಶಾಸನಗಳ ಆಧಾರದಿಂದ ಸುಮಾರು 6ನೆಯ ಶತಕದಿಂದ 9ನೆಯ ಶತಕದವರೆಗಿನ ಕಾಲವನ್ನು ಕನ್ನಡ ಸಾಹಿತ್ಯಾರಂಭದ ಒಂದು ಘಟ್ಟವೆಂದು ಹೇಳಬಹುದು. ಇದನ್ನು ಪಂಪ ಪೂರ್ವಯುಗವೆಂದು ಡಾ. ರಂ. ಶ್ರೀ. ಮುಗಳಿಯವರು ಯಥಾರ್ಥವಾಗಿ ಹೆಸರಿಸಿದ್ದಾರೆ. ಈ ಯುಗದಲ್ಲಿ ಗದ್ಯ ಪದ್ಯ ಮಿಶ್ರಿತ ಚಂಪೂ ಕೃತಿಗಳು ವಿಶೇಷವಾಗಿ ಗದ್ಯ ಕಥೆಗಳು ಪ್ರಚುರಗೊಂಡಿದ್ದವು. ಪಳಗನ್ನಡವೆಂಬ ಪದವನ್ನು ಬಳಸುವ ಕವಿರಾಜಮಾರ್ಗಕಾರನು ತನ್ನ ಕಾಲಕ್ಕಿಂತ ಮುಂಚೆ ಪ್ರಚುರಗೊಂಡಿದ್ದ ವಿಶಿಷ್ಟ ಸ್ವರೂಪದ ವ್ಯಾಕರಣ ಪ್ರಕ್ರಿಯೆಗಳುಳ್ಳ ಪೂರ್ವದ ಹಳಗನ್ನಡದ ಭಾಷಾ ಶೈಲಿಯೊಂದನ್ನು ಸೂಚಿಸಿದ್ದಾನೆ. ಪ್ರಾಚೀನ ಕನ್ನಡ ಶಾಸನಗಳಲ್ಲಿ ಈ ಭಾಷಾ ಶೈಲಿಯ ನಿದರ್ಶನಗಳು ಕಂಡು ಬರುವುದೂ ನಿಜ. ಅಲ್ಲದೆ ಕವಿರಾಜ ಮಾರ್ಗಕಾರನು ಕುರಿತು ಓದದ ಕಾವ್ಯ ಪ್ರಯೋಗ ಪರಿಣತ ಮತಿಗಳೆನಿಸಿದ್ದ ಕನ್ನಡ ನಾಡವರ್ಗಳನ್ನು ಎಂದರೆ ಜಾನಪದ ಕವಿಗಳನ್ನು ಬಣ್ಣಿಸಿದ್ದಾನೆ. ಈ ವೈಶಿಷ್ಟ್ಯಗಳ ಅವಲೋಕದಿಂದ ಪಂಪ ಪೂರ್ವಯುಗ ಅಥವಾ ಪೂರ್ವದ ಹಳಗನ್ನಡ ಯುಗವು ಸಂಸ್ಕೃತ ಪ್ರಾಕೃತಗಳ ಪ್ರಭಾವದಿಂದ ಕನ್ನಡದ ದೇಸಿ ಸಾಹಿತ್ಯವು ಹಿಂದೆ ಬಿದ್ದು, ಪ್ರಯೋಗಾವಸ್ಥೆಯ ಮಾರ್ಗ (classical) ಸಾಹಿತ್ಯವೊಂದು ರೂಪುಗೊಳ್ಳುತ್ತಿದ್ದ ಕಾಲವೆಂದು ಹೇಳಬಹುದಾಗಿದೆ. ಈ ಸಾಹಿತ್ಯಕ್ಕೆ ಮಾರ್ಗದರ್ಶನವೀಯಲೆಂದೇ ಕವಿರಾಜಮಾರ್ಗ ಗುಣ ಗಾಂಕೀಯದಂಥ ಶಾಸ್ತ್ರ ಗ್ರಂಥಗಳು ಹುಟ್ಟಿರಬೇಕು.

**ಕನ್ನಡ ಸಾಹಿತ್ಯ ಚರಿತ್ರೆಯ ವಿಭಾಗ ಕ್ರಮ ಮತ್ತು ಅದರ ಬೆಳವಣಿಗೆ :**

ಪಂಪ ಪೂರ್ವ ಯುಗದ ತರುವಾಯ ಬೆಳೆದು ಬಂದ ಕನ್ನಡ ಸಾಹಿತ್ಯ ಚರಿತ್ರೆಯನ್ನು (1) ಪ್ರಾಚೀನ (ಕ್ರಿ.ಶ. 900 ರಿಂದ 1200), (2) ಮಧ್ಯಕಾಲೀನ (ಸು. 1200 ರಿಂದ 1700) ಮತ್ತು (3) ಆಧುನಿಕ (ಸು. 1850 ರಿಂದೀಚಿನದು) ಎಂದು ಅಭ್ಯಾಸದ ಅನುಕೂಲತೆಯ ದೃಷ್ಟಿಯಿಂದ ವಿಭಜಿಸಬಹುದಾಗಿದೆ. ಈ ವಿಭಾಗ ಕ್ರಮವನ್ನೇ ಅನುಕ್ರಮವಾಗಿ ಭಾಷಾ ದೃಷ್ಟಿಯಿಂದ ಹಳಗನ್ನಡ ಸಾಹಿತ್ಯ ಮತ್ತು ಹೊಸಗನ್ನಡ ಸಾಹಿತ್ಯ ವಿಭಾಗಗಳೆಂದೂ ಕರೆಯಬಹುದಾಗಿದೆ. ಕ್ರಿ. ಶ. 1700 ರಿಂದ 1850 ರವರೆಗಿನದು ಸಂಧಿಕಾಲ. Transitional ಎನ್ನಬಹುದು. ಹೀಗೆಯೇ ಇಂದಿನ ವಿಭಾಗಗಳ ಮಧ್ಯದಲ್ಲೂ ಕೆಲಮಟ್ಟಿನ ಸಂಧಿಕಾಲಗಳು ಇದ್ದೇ ಇವೆ. ಹೆಚ್ಚು ಕಡಿಮೆ ಇವೇ ಕಾಲ ವಿಭಾಗಗಳನ್ನು ಇರಿಸಿಕೊಂಡು ಮತ ಧರ್ಮ ದೃಷ್ಟಿಯಿಂದ 9ನೆಯ ಶತಕದಿಂದ 12ನೆಯ ಶತಕದವರೆಗೆ ಜೈನ ಯುಗ, 12ನೆಯ ಶತಕದ ಮಧ್ಯದಿಂದ 15ನೆಯ ಶತಕದವರೆಗೆ

ವೀರಶೈವ ಯುಗ ಮತ್ತು 15ನೆಯ ಶತಕದಿಂದ 19ನೆಯ ಶತಕದ ವರೆಗೆ ವೈಷ್ಣವ ಯುಗ ಎಂಬ ವಿಭಾಗ ಕ್ರಮವೂ ರೂಢಿಯಲ್ಲಿದೆ. ಇಲ್ಲಿ ನಡುಗನ್ನಡ ಅಥವಾ ಮಧ್ಯಕಾಲೀನ ವಿಭಾಗವು ವೀರಶೈವ ಮತ್ತು ವೈಷ್ಣವ ಯುಗಗಳಾಗಿ ವಿಭಜಿಸಲ್ಪಟ್ಟಿದೆ. ಈ ವಿಭಾಗ ಕ್ರಮವನ್ನು ಸೂಚಿಸಿದ ಇ. ಪಿ. ರಾಯಿಸ್ ಅವರು ಮೊದಲ ಯುಗದಲ್ಲಿ ಇತರ ಮತ ಮಿಶ್ರಣವಿಲ್ಲದ ಜೈನ ತತ್ವ ಜಿನ ಭಕ್ತಿಗಳ ಪ್ರವಾಹವೂ ಎರಡನೆ ಹಾಗೂ ಮೂರನೆಯ ಯುಗಗಳಲ್ಲಿ ಕ್ರಮವಾಗಿ ವೀರಶೈವ ತತ್ವ-ಶಿವಭಕ್ತಿ ಮತ್ತು ವೈಷ್ಣವ ತತ್ವ ವಿಷ್ಣು ಭಕ್ತಿ ಪ್ರವಾಹಗಳೂ ಒಂದರೊಳಗೊಂದು ಬೆರೆಯದೆ ಪ್ರತ್ಯೇಕವಾಗಿ ಹರಿದು ಕನ್ನಡ ಸಾಹಿತ್ಯಕ್ಕೆ ಮಹಾಪೂರವೊದಗಿಸಿವೆಯೆಂದು ಹೇಳಿದ್ದಾರೆ. ಆಧುನಿಕ ಅಥವಾ ಹೊಸಗನ್ನಡ ಸಾಹಿತ್ಯ ವಿಭಾಗದಲ್ಲಿ ವೈಜ್ಞಾನಿಕ ಪ್ರಗತಿಯ ಫಲವಾಗಿ ಮತಾತೀತ secular ದೃಷ್ಟಿ ರಾಷ್ಟ್ರೀಯ ಭಾವ, ಮತ್ತು ಸಾಮಾಜಿಕ ಪ್ರಜ್ಞೆ ಸಾಹಿತ್ಯದ ತಳಹದಿಯ ತತ್ವಗಳಾಗಿದೆ.

ಭಾಷಾ ದೃಷ್ಟಿ ಮತ್ತು ಮತ ಧರ್ಮ ದೃಷ್ಟಿಯ ಈ ವಿಭಾಗದಲ್ಲಿ ಸಾಹಿತ್ಯ ರೂಪಗಳೂ ಭಿನ್ನ ಭಿನ್ನವಾಗಿರುವುದು ಗಮನಾರ್ಹವಾಗಿದೆ. ಜೈನ ಯುಗದ ಹಳಗನ್ನಡ ಕಾವ್ಯಗಳೆಲ್ಲ ಆರಂಭದಲ್ಲಿ ಹೆಚ್ಚಾಗಿ ಸಂಸ್ಕೃತಮಯ ಪ್ರೌಢ ಚಂಪೂ ರೂಪದಲ್ಲಿವೆ. ಬರಬರುತ್ತ ಗದ್ಯ ಕಥಾನಕಗಳೂ ಸುಲಲಿತ ಅನುವಾದ ಕೃತಿಗಳೂ ಕಾಣಿಸಿಕೊಂಡಿವೆ. ವೀರಶೈವ ಯುಗದ ನಡುಗನ್ನಡ ಕೃತಿಗಳು ವಚನ, ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ ಇತ್ಯಾದಿ ರೂಪಗಳಲ್ಲೇ ಹೆಚ್ಚಾಗಿದ್ದು ಚಂಪೂರೂಪ ಅಲ್ಪವಾಗಿದೆ. ವೈಷ್ಣವ ಯುಗದ ನಡುಗನ್ನಡ ಕೃತಿಗಳೂ ಹೆಚ್ಚಾಗಿ ಷಟ್ಪದಿ ಮತ್ತು ದಾಸರ ಕೀರ್ತನೆಗಳ ರೂಪದಲ್ಲಿವೆ. ಈ ಮಧ್ಯಕಾಲೀನ ವೀರಶೈವ ಮತ್ತು ವೈಷ್ಣವ ಸಾಹಿತ್ಯದಿಂದಾಗಿ ಕನ್ನಡ ಸಾಹಿತ್ಯವಾಹಿನಿ ಮಾರ್ಗ ಎಂದರೆ classical ದಿಂದ ದೇಸಿ (indigenous) ಯತ್ತ ಹೊರಳಿದೆ. ಆಧುನಿಕ ಯುಗದ ಹೊಸಗನ್ನಡ ಸಾಹಿತ್ಯವು ಪಾಶ್ಚಾತ್ಯ ಸಾಹಿತ್ಯ ಪ್ರೇರಣೆಯಿಂದ ಹೊಸ ಹಾದಿ ಹಿಡಿದು ಭಾವಗೀತೆ, ಸಣ್ಣ ಕತೆ, ಕಾದಂಬರಿ, ಏಕಾಂಕ, ದೊಡ್ಡ ನಾಟಕ, ಹರಟೆ, ಪ್ರಬಂಧ, ಸಾಹಿತ್ಯ ವಿಮರ್ಶೆ, ಜೀವನ ಚರಿತ್ರೆ, ಆತ್ಮ ಚರಿತ್ರೆ, ವ್ಯಕ್ತಿ ಚಿತ್ರ, ಪ್ರವಾಸ ಸಾಹಿತ್ಯ - ಇತ್ಯಾದಿ ಹಲ ವಿಧದ ಸಾಹಿತ್ಯ ರೂಪಗಳನ್ನು ಪ್ರದರ್ಶಿಸುತ್ತಲಿದೆ.

# ಕನ್ನಡ ಸಾಹಿತ್ಯ - ಹಳಗನ್ನಡ ರೀತಿಯದು

ಕನ್ನಡವು ಭಾರತದ ಅತ್ಯಂತ ಪ್ರಾಚೀನ ಭಾಷೆಗಳಲ್ಲಿ ಒಂದಾಗಿದೆ. ಸಾಹಿತ್ಯ ರೂಪ ಹಾಗೂ ವಸ್ತುಗಳಲ್ಲಿ ವಿವಿಧವೂ, ಗತಿ ಶೀಲವೂ, ಸತ್ವಯುಕ್ತವೂ ಆಗಿರುವ ಅಖಂಡ ಸಾಹಿತ್ಯ ಪರಂಪರೆಯು ಅದಕ್ಕಿದೆ. ಅದರ ಸಾಹಿತ್ಯವು ಖಚಿತವಾಗಿ ಒಂದು ಸಾವಿರ ವರುಷಗಳಿಗೂ ಮೀರಿದ ಪ್ರಾಚೀನತೆಯುಳ್ಳದ್ದು. ಯಾಕಂದರೆ, ಕನ್ನಡದ ಮೊದಲ ಉಪಲಬ್ಧ ಗ್ರಂಥವೆನಿಸಿದ ಕವಿರಾಜ ಮಾರ್ಗವು ಕ್ರಿ.ಶ. 9ನೆಯ ಶತಕದಲ್ಲಿ ರಚಿತವಾದುದು. ಅಲ್ಲದೆ, ನಂಬಲರ್ಹವಾದ ಶಾಸನಗಳ ಹಾಗೂ ಸಾಹಿತ್ಯಿಕ ಆಧಾರಗಳ ಮೇಲಿಂದ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಇನ್ನೂ ಹಿಂದಕ್ಕೆ ಎಂದರೆ 6ನೆಯ ಶತಕದವರೆಗೆ ಒಯ್ಯಲು ಸಾಧ್ಯವಿದೆ. ಬಹು ಪ್ರಾಚೀನವೂ ವಿಸ್ತಾರವೂ ವೈವಿಧ್ಯಮಯವೂ ಆಗಿರುವ ಈ ಸಾಹಿತ್ಯದ ಸಮೀಕ್ಷೆಯನ್ನು ಸ್ಥೂಲವಾಗಿ ಮತ್ತು ಸ್ವಲ್ಪದರಲ್ಲಿ ಮಾತ್ರ ಇಲ್ಲಿ ಮಾಡಬಹುದಾಗಿದೆ. ವಾಡಿಕೆಯಂತೆ-ಈ ಸಮೀಕ್ಷೆಯನ್ನು ಕಾಲಾನುಕ್ರಮವಾಗಿ ವಿಂಗಡಿಸಿ ಮಾಡುವುದು ಸಾಧ್ಯ. ಸಾಹಿತ್ಯರೂಪ ಇಲ್ಲವೆ ಭಾಷೆಯ ಅವಸ್ಥೆಗಳನ್ನು ಕುರಿತೂ ಈ ಪರಿಶೀಲನೆ ನಡೆಯಬಹುದಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯ ಎಲ್ಲ ಕಾಲ ವಿಭಾಗಗಳಲ್ಲಿ ಹಳಗನ್ನಡದಲ್ಲಿ ರಚಿತವಾಗಿರುವ ಕನ್ನಡ ಸಾಹಿತ್ಯವನ್ನು ಕುರಿತು ಈ ಲೇಖನದಲ್ಲಿ ಪರಿಶೀಲಿಸಲಿಚ್ಛಿಸುತ್ತೇನೆ. ಸ್ಥೂಲವಾಗಿ ಹೇಳಬೇಕೆಂದರೆ ಹಳಗನ್ನಡ ಸಾಹಿತ್ಯವು ಮೊದಲ ವಿಭಾಗದಲ್ಲಿ ಎಂದರೆ ಕ್ರಿ.ಶ. 6ನೆಯ ದಶಕದಿಂದ 12ನೆಯ ದಶಕದ ಮಧ್ಯದವರೆಗೆ ನಿರ್ಮಾಣವಾದುದು ; ಮತ್ತು ಆಗ ಅದು ತಳೆದ ಪ್ರಮುಖ ಸಾಹಿತ್ಯ ಪ್ರಕಾರವು ಮಾರ್ಗ ಪದ್ಧತಿಯ ಗದ್ಯ-ಪದ್ಯ ಮಿಶ್ರಿತ ಚಂಪೂ ಎಂಬುದಾಗಿತ್ತು. ಸಾಹಿತ್ಯದ ಚರಿತ್ರೆ ವಿವಿಧ ಅವಸ್ಥೆಗಳಲ್ಲಿ ಹಾಯ್ದು ಬಂದಿದೆ. ಆದರೂ ಅನಂತರದ ಕಾಲ ವಿಭಾಗಗಳಲ್ಲಿ ಇತರ ಸಾಹಿತ್ಯ ರೂಪಗಳ ಹಾಗೂ ಭಾಷಾ ಸ್ವರೂಪಗಳ ಪ್ರಾಬಲ್ಯವಿದ್ದಾಗಲೂ ಹಳಗನ್ನಡ ಚಂಪೂ ಕೃತಿಗಳ ನಿರ್ಮಾಣಕ್ಕೆ ತಡೆಯಿರಲಿಲ್ಲ. ವಸ್ತು - ಸ್ಥಿತಿ ಎಂದರೆ 17 ಮತ್ತು 18ನೆಯ ದಶಕಗಳಲ್ಲಿ ಹಳಗನ್ನಡ ಕೃತಿ ರಚನೆಯು ವಿಲಕ್ಷಣವಾಗಿ ಪುನಶ್ಚೇತನಗೊಂಡದ್ದು ಕಂಡು ಬರುತ್ತದೆ. ಆಧುನಿಕ ಕಾಲದಲ್ಲೂ ಹಳಗನ್ನಡದಲ್ಲಿ ರಚಿತವಾದ ಉತ್ತಮ ಸಾಹಿತ್ಯ ಕೃತಿಗಳು ಅಪರೂಪವಾಗಿಯಾದರೂ ಕಾಣ ದೊರೆಯುತ್ತವೆ.

ಹಲ್ಮಿಡಿಯಲ್ಲಿ ದೊರೆತ ಕ್ರಿ.ಶ. 5ನೆಯ ಶತಕದ ಶಾಸನವೇ ಅತ್ಯಂತ ಪ್ರಾಚೀನವಾದದ್ದು. ಈ ಶಾಸನದಲ್ಲಿ ಅದೇ ಬೆಳವಣಿಗೆ ಹೊಂದುತ್ತಿರುವ ಪೂರ್ವದ ಹಳಗನ್ನಡವೆಂದು ಹೆಸರಿಸಲಾದ ಹಳಗನ್ನಡ ಗದ್ಯದ ಸುಳಿವುಗಳು ಕಂಡು ಬರುತ್ತವೆ. ಈ ಶಾಸನವು ಸಾಹಿತ್ಯಿಕ ವೈಖರಿಯುಳ್ಳುದ್ದಾಗಿದ್ದು ಆ ಕಾಲದಲ್ಲಿ ಪ್ರೌಢ ಶೈಲಿಯ ಬರವಣಿಗೆ ಇತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಆದರೆ ಇದು ಸಾಹಿತ್ಯಿಕ ರಚನೆಯಾಗಿರದೆ ಹೆಚ್ಚಾಗಿ ಶಾಸನದ ದಾಖಲೆಯೇ ಆಗಿದೆ. ಹಳಗನ್ನಡದಲ್ಲಿ ನಿಜವಾದ ಸಾಹಿತ್ಯಿಕ ಅಭಿವ್ಯಕ್ತಿಯ ಮೊಟ್ಟ ಮೊದಲ ಉದಾಹರಣೆಯೆಂದರೆ ಗುಣ ಮಧುರನೆಂಬ ಮಹಾ ವ್ಯಕ್ತಿಯ ಗುಣಗಾನವನ್ನೊಳಗೊಂಡ ಒಂದು ಶಾಸನ ಪದ್ಯ, ಇದೊಂದು ಸುಂದರ ವ್ಯಕ್ತಿ ಚಿತ್ರ. ಕೆಲವೆಡೆಗಳಲ್ಲಿ ಇದರ ಅರ್ಥವು ಕ್ಲಿಷ್ಟವಾಗಿದ್ದರೂ ಬಿಗುಹಿನ ರಚನೆಯಿಂದಾಗಿ ತುಂಬಾ ಪರಿಣಾಮಕಾರಿಯಾದುದು. ಈ ಶಾಸನದ ಕಾಲವೂ ಕ್ರಿ.ಶ. 500 ರಿಂದ 555ರ

ಈ ಉದ್ದೇಶ ಸಾಧನೆಗಾಗಿ 'ಸಮಗ್ರ ಯೋಗ' ವಿಧಾನವನ್ನು ಇಲ್ಲಿ ಬಹಿರಂಗವಾಗಿ ಸಾರಲಾಗಿದೆ. ಈ ವಿಧಾನವು ಅದರ ಗುರಿಯ ಹಾಗೆ ಸಮಗ್ರವೂ ಅಖಂಡವೂ ಆಗಿದೆ. ಆಂದರೆ ಚೇತನದ ಹಾಗೂ ಪ್ರಕೃತಿಯ ಸಮಗ್ರ ಹಾಗೂ ಅಖಂಡ ಪರಿವರ್ತನೆಯಾಗಬೇಕಾಗಿದೆ. ಈ ಯೋಗದ ವಿಶಿಷ್ಟ ವಿಧಾನದ ಪ್ರಕ್ರಿಯೆಗಳಿಗೆ ಸಹಾಯಕವಾಗುವಂತೆ ಹಳೆಯ ಯೋಗ ವಿಧಾನಗಳ ಪ್ರಕ್ರಿಯೆಗಳನ್ನು ಕೆಲಮಟ್ಟಿಗೆ ಮಾತ್ರ ಬಳಸಿಕೊಳ್ಳಲಾಗಿದೆ. ಹಳೆಯ ಯೋಗಗಳಲ್ಲಿ 'ಸಮಗ್ರ ಯೋಗ'ದ ಈ ವಿಧಾನವನ್ನು ಅಥವಾ ಇದರಂಥದೊಂದನ್ನು ಇಡಿಯಾಗಿ ಕಂಠೋಕ್ತವಾಗಿ ಸಾರಿಲ್ಲ. ಇಲ್ಲವೆ ಈ ವಿಧಾನದ ಸಿದ್ಧಿಯನ್ನು ಯಾರೂ ಸಾಧಿಸಿಕೊಂಡಂತೆಯೂ ನನಗೆ ಕಂಡುಬಂದಿಲ್ಲ. ಹಾಗೆ ನನಗೆ ಕಂಡು ಬಂದಿದ್ದರೆ ಈ ಹೊಸ ಯೋಗ ಮಾರ್ಗವೊಂದನ್ನು ರಚಿಸಲು ನನ್ನ ಸಮಯವನ್ನು ಹಾಳು ಮಾಡಿಕೊಳ್ಳುತ್ತಿರಲಿಲ್ಲ. ಮೂವತ್ತು ವರ್ಷಗಳ ಸುದೀರ್ಘ ಅನ್ವೇಷಣೆ ಮತ್ತು ಅಂತಃ ಸೃಷ್ಟಿಗಳಲ್ಲಿ ತೊಡಗದೆ, ಆಗಲೆ ಸರ್ವರಿಗಾಗಿ, ಅಚ್ಚುಕಟ್ಟಾಗಿ ಸಿದ್ಧಪಡಿಸಿದ ಯೋಗಪಥಗಳಲ್ಲಿ ಅನಾಯಾಸವಾಗಿ ನಾಗಾಲೋಟದಿಂದ ನನ್ನ ಗುರಿ ಮುಟ್ಟಲು ಧಾವಿಸುತ್ತಿದ್ದೆ. ನಮ್ಮ ಈ 'ಸಮಗ್ರ ಯೋಗ'ವು ಹಳೆಯ ಯೋಗಪಥಗಳನ್ನೆ ಪುನಃ ಅನುಸರಿಸುವುದಿಲ್ಲ, ಇದೊಂದು ನೂತನ ಆಧ್ಯಾತ್ಮಿಕ ಸಾಹಸವಾಗಿದೆ !'' ಎಂದಿದ್ದಾರೆ ಶ್ರೀ ಅರವಿಂದರು. ವರಕವಿ ಬೇಂದ್ರೆಯವರು ಶ್ರೀ ಅರವಿಂದರ 'ಮಹಾ ಪ್ರಸ್ಥಾನ'ವನ್ನು ಕುರಿತು ಬರೆದ ಕರ್ಮದ ಎರಡು ಪದ್ಯಗಳನ್ನೋದಿ ಈ ಪ್ರಬಂಧದ ಓದನ್ನು ಮುಗಿಸುವೆ :-

ತಾಪಾರ್ತಜನಕೆ ನೆರಳಾಗಿ ನೀಡಿ ವಟವೃಕ್ಷವಾದ ಜೀವ ; ।
ತತ್ ಬ್ರಹ್ಮದಲ್ಲಿ ಬೇರ್ಬಿಟ್ಟು ಇಳಿದ ಅಶ್ವತ್ಥದಂಥ ಭಾವ.।
ಧೀ ಪ್ರಳಯ ಜಲದಿ ತೇಲಾಡುತಿಹುದು ಅರಳೆಲೆಯಲೇನೊ ಒಂದು ।
ತಾನಾಗಿ ನಾಳೆ ನವಜೀವಕೋಟಿಯನೆ ಮೆರೆಯಲಿಹುದು ಬಂದು.।

............................................................................................................

ಅರವಿಂದವೆಂಬ ಬರಿ ಹೆಸರಿನಲ್ಲೆ ಸೌಗಂಧ ತುಂಬಿಬಹುದು।
ಚಾರಿತ್ರ್ಯವನ್ನು ನೆನಸಿದರೆ ಸಾಕು ಬ್ರಹ್ಮಾಂಡ ಬಿಂಬಿಸುವುದು.।
ಆ ಒಂದೆ ರಾತ್ರಿಯಲಿ ಬಯಲು ತುಂಬಿತೋ ಪಾರಿಜಾತ ಕೀರ್ತಿ।
ಈ ವಿಶ್ವದೊಡನೆ ಒಂದಾಗಿ ನಿಂತಿತೋ ಆ ವಿರಾಟ ಮೂರ್ತಿ.।।

# ಸಾಹಿತ್ಯದಲ್ಲಿ ರಸದ ಉದ್ದೇಶ

ಎಸ್.ಆರ್.ಮಳಗಿ

ಸಾಹಿತ್ಯದಲ್ಲಿ ರಸದ ಉದ್ದೇಶವನ್ನು ಕುರಿತು ಶ್ರೇಷ್ಠ ಸಾಹಿತಿ ಮಾಸ್ತಿಯವರು ಹೀಗೆ ಹೇಳಿದ್ದಾರೆ : ಅವರ ಅಭಿಪ್ರಾಯದ ಸಾರವಿದು: ಸಾಹಿತ್ಯ ಸಾರ್ಥಕವಾಗುವುದು ರಸದಿಂದ. ಅದು ಸಾಹಿತ್ಯ ನಿರ್ಮಾಣದ ಬೇರು; ಹಾಗಯೇ ಅದರ ಕೊನೆಯೂ ಅಹುದು. ಕವಿ ಯಾವುದೋ ಅನುಭವದಿಂದ ರಸಾವೇಶಭರಿತನಾಗುತ್ತಾನೆ. ಆಹ! ಎಂದು ಉದ್ಗರಿಸುತ್ತಾನೆ. ಆಗ ಕಂಡ ತನ್ನ ದರ್ಶನವನ್ನು ತನ್ನ ಕೃತಿಯಲ್ಲಿ ರೂಪಿಸುತ್ತಾನೆ. ಈ ರೂಪಣವು ಕಲೆಯ ಮಟ್ಟಕ್ಕೆ ಬಂದರೆ ಈ ಕೃತಿಯನ್ನು ಓದುವ ಸಹೃದಯನು ಕವಿ ಪಡೆದ ರಸಾನುಭವವನ್ನು ತಾನೂ ಪಡೆಯುತ್ತಾನೆ. ಆಹ ! ಎಂದು ಆತನೂ ಉದ್ಗರಿಸುತ್ತಾನೆ. ಕವಿಯಲ್ಲಾಗಲಿ ಕೃತಿಯಲ್ಲಾಗಲಿ ಅನುಭವ ಈ ಮಟ್ಟಕ್ಕೆ ಮುಟ್ಟುವುದೇ ರಸ.

ಗೆದ್ದೆನೆಂಬ ಸಾಹಿತ್ಯ ರಸದಿಂದ ಹುಟ್ಟಿರಬೇಕು ; ರಸವನ್ನು ಮುಟ್ಟಿರಬೇಕು. ಎಂದ ಮೇಲೆ ಸಾಹಿತ್ಯದಲ್ಲಿ ರಸದ ಉದ್ದೇಶ ಸಾಹಿತ್ಯದ ಉದ್ದೇಶವನ್ನು ಸಾಧಿಸಿ ಕೊಡುವುದು.

ಕವಿಯ ಜೀವ ತಕ್ಕಷ್ಟು ಉದಾತ್ತವಾದ ಕಾವ್ಯಾನುಭವವನ್ನು ಪಡೆದಾಗ ಬ್ರಹ್ಮಾನಂದ ಸದೃಶವಾದ ಸ್ಥಿತಿಯನ್ನು ಮುಟ್ಟುತ್ತದೆ ಎಂದು ನಮ್ಮ ಪ್ರಾಚೀನ ಕಾವ್ಯ ಮೀಮಾಂಸಕರು ಹೇಳುತ್ತಾರೆ. ಕವಿ ಜೀವ ಈ ಬಗೆಯ ಆನಂದವನ್ನು ಅನುಭವಿಸಿ ಅದರ ಸವಿಯನ್ನು ತನ್ನ ಜೊತೆಯ ಸಹೃದಯ ಜೀವಕ್ಕೆ ಸವಿಸಲು ಬಯಸುತ್ತದೆ.

ಸಾಮಾನ್ಯ ಜೀವ ಎಳೆಯ ಜೀವ. ಅದೂ ರಸಾನುಭವವನ್ನು ಬಯಸುತ್ತದೆ. ಆದರೆ ಅದನ್ನು ಪಡೆಯುವುದು ಹೇಗೆಂದು ಕಾಣದು. ಇಲ್ಲಿ ವಿಷಯವನ್ನು ಸ್ಪಷ್ಟಪಡಿಸಲು ಮಾಸ್ತಿಯವರು ಒಂದು ಉಪಮೆಯನ್ನು ಉದಾಹರಿಸುತ್ತಾರೆ. ಅದು ಹೀನೋಪಮೆಯೆಂದು ದಯವಿಟ್ಟು ಭಾವಿಸಬಾರದು. ಉಪಮೆಯ ಸಾರ್ಥಕತೆಯನ್ನೂ ತಾತ್ಪರ್ಯಾರ್ಥವನ್ನೂ ಗ್ರಹಿಸಬೇಕು. ಅವರು ಕೊಡುವ ಉಪಮೆಯ ಉದಾಹರಣೆ ಇದು. ನಾಯಿ ಒಣ ಮೂಳೆಯನ್ನು ಕಡಿಯುತ್ತ ವೃಥಾ ತೊಳಲುತ್ತಿರುವುದನ್ನು ನಾವೆಲ್ಲ ನೋಡುತ್ತೇವಷ್ಟೆ ? ಅದು ತೊಳಲುತ್ತಿರುವುದು ಮೂಳೆಗೆ ಅಂಟಿದ ಮಾಂಸಖಂಡದ ನೆನವಿನಿಂದ ; ಮೂಳೆಯೊಳಗಿರುವ ತಿರುಳ ಕನಸಿನಿಂದ. ಜೀವನದ ರಸ ಸಾಮಗ್ರಿಯನ್ನು ಕಂಡ ಸಾಮಾನ್ಯ ಜೀವ ಅದನ್ನು ವೃಥಾ ಕಡಿಯುತ್ತ ತೊಳಲುತ್ತದೆ. ಇದಕ್ಕೆ ಅಂಟಿಕೊಂಡಿರುವ ಸುಖ ಎಲ್ಲಿ ? ಇದರೊಳಗಿರುವ ತಿರುಳು ಏನು ? ಎಂದು ಕೇಳುತ್ತದೆ. ಕವಿ ಇದನ್ನು ಬಲ್ಲ ; ಹೇಳಬಲ್ಲ. ಹೇಳಿದಾಗ ಬ್ರಹ್ಮಾನಂದವನ್ನೇ ಸವಿಸುತ್ತಾನೆ. ರಸಋಷಿಯೇ ಆಗುತ್ತಾನೆ.

# ಶ್ರೀ ಅರವಿಂದರ

# ಸಮಗ್ರ ಯೋಗ

## ಎಸ್.ಆರ್. ಮಳಗಿ

ಶ್ರೀ ಅರವಿಂದರು 1904ರಿಂದಲೇ ತಮ್ಮ ನಿರಂತರ ಸಾಧನೆಯ ಮೂಲಕ ಹೊಚ್ಚಹೊಸದಾಗಿ ಶೋಧಿಸಿದ 'ಪೂರ್ಣಯೋಗ' ಅಥವಾ 'ಸಮಗ್ರ-ಯೋಗ'ದ ಗುರಿ, ಬೇರೆ ಯೋಗ ಪಥಗಳಿಗಿಂತ ಭಿನ್ನವಾದುದು. ಸಾಮಾನ್ಯ ಅಜ್ಞಾನಮಯ ಪ್ರಜ್ಞೆಯೊಳಗಿಂದ ಹೊರ ಬಂದು, ಮೇಲೇರಿ ಹೋಗುವುದೊಂದೇ ಈ ಯೋಗದ ಗುರಿಯಲ್ಲ. ಮೇಲಿನ ದಿವ್ಯ ಚೇತನದ 'ಅತಿಮಾನಸ'ವೆಂಬ ಶಕ್ತಿಯನ್ನು ಮನ, ಪ್ರಾಣ, ದೇಹಗಳ ಜ್ಞಾನದಲ್ಲಿ ಕೆಳಗಿಳಿಸಿ ತಂದು, ಅವುಗಳ ಸಂಪೂರ್ಣ ಪರಿವರ್ತನೆಯನ್ನು ಸಾಧಿಸುವ ಘನವಾದ ಉದ್ದೇಶ ಇದರದಾಗಿದೆ : ಮತ್ತು ಜಡದಲ್ಲಿ ದಿವ್ಯ ಜೀವನವನ್ನು ಸೃಷ್ಟಿಸುವುದಿದೆ.

ಶ್ರೀ ಅರವಿಂದರ ಈ ಯೋಗಸಾಧನೆ ಯಾವ ಮಾನಸಿಕ ಬೋಧೆಯಿಂದಾಗಲಿ, ಧ್ಯಾನ, ಮಂತ್ರ ಮುಂತಾದ ನಿರ್ದಿಷ್ಟ ವಿಧಾನಗಳ ಮೂಲಕವಾಗಲಿ ಸಾಗುವಂಥದಲ್ಲ. ಪರಮಾತ್ಮನನ್ನು ಕುರಿತ ಉತ್ಕಟ ಅಭೀಪ್ಸೆ, ಅಂತರ್ಮುಖಿಯಾದ ಇಲ್ಲವೆ ಊರ್ಧ್ವಮುಖಿಯಾದ ಆತ್ಮೈಕಾಗ್ರತೆ, ನಮ್ಮ ಮೇಲಿರುವ ದಿವ್ಯ ಶಕ್ತಿಯತ್ತ, ಇಲ್ಲವೆ ಅದರ ಪ್ರಭಾವ ಹಾಗೂ ಕ್ರಿಯೆಗಳತ್ತ ಇಲ್ಲವೆ ನಮ್ಮ ಹೃದಯಸ್ಥ ಭಗವತ್ ಸಾನ್ನಿಧ್ಯದತ್ತ ಆತ್ಮೋನ್ಮಿಲನ - ಇವುಗಳಿಂದ ಈ ಯೋಗ - ಸಾಧನೆ ಸಾಗುವುದು. ಮತ್ತು ಇದರ ಜತೆಗೆ ಇದಕ್ಕೆ ವಿರೋಧಕವಾಗಿರುವುದೆಲ್ಲವನ್ನೂ ತಿರಸ್ಕರಿಸುವುದರ ಮೂಲಕ ಈ ಯೋಗ ಸಾಧನೆ ಮುಂದುವರಿಯುವುದು. ಇಲ್ಲಿಯ ಆತ್ಮೋನ್ಮಿಲನ ಕ್ರಿಯೆ ಅಪ್ಪಟ ಶ್ರದ್ಧೆ, ಅಭೀಪ್ಸೆ ಮತ್ತು ಸಮರ್ಪಣಾ ಭಾವಗಳಿಂದ ಮಾತ್ರವೆ ಸಿದ್ಧಿಗೊಳ್ಳುವುದು.

ಇಲ್ಲಿ ಏನಾದರೂ ಸ್ಥಳಾವಕಾಶವಿರುವುದಾದರೆ ಅದು 'ಅತಿಮಾನಸ' ಸೃಷ್ಟಿಗೆ ಮಾತ್ರ, ದಿವ್ಯ ಸತ್ತೆಯನ್ನು ಈ ಪೃಥ್ವಿಯ ಮೇಲೆ ತಂದಿಳಿಸುವುದಕ್ಕೆ ಮಾತ್ರ. ದಿವ್ಯ ಸತ್ತೆಯ ಈ ಅವತರಣವು ಮನ-ಪ್ರಾಣಗಳಲ್ಲಷ್ಟೇ ಅಲ್ಲ, ಅದು ದೇಹದಲ್ಲಿ ಮತ್ತು ಜಡ ದ್ರವ್ಯದಲ್ಲೂ ಆಗಬೇಕು ಎನ್ನುತ್ತಾರೆ ಶ್ರೀ ಅರವಿಂದರು. ಮತ್ತು ಮಾನವನ ಅಹಂಕಾರ ಕೇಂದ್ರೀಕೃತ ಪ್ರಾಣ ಶಕ್ತಿಯ ನಾನಾ ಬಗೆಯ ಆಶೆ-ಆಕಾಂಕ್ಷೆಗಳ ಪೂರೈಕೆಗಾಗಲಿ, ಮಾನವ ಮನದ ವಿಚಾರಗಳ ಸಿದ್ಧಿಗೋಸುಗವಾಗಲಿ ಅವಕಾಶವೀಯುವುದು ಈ ಯೋಗದ ಉದ್ದೇಶವಲ್ಲ. ನಮ್ಮ ಮನಕ್ಕೆ ಬಂದಂತೆ ವರ್ತಿಸಲು ನಾವಿಲ್ಲಿ ಜೀವಿಸುತ್ತಿಲ್ಲ. ಹಾಗೆ ವರ್ತಿಸಲು ಸಮರ್ಥರಾಗುವಂತೆ ಜಗವೊಂದನ್ನು ಸೃಷ್ಟಿಸಲೂ ನಾವಿಲ್ಲಿ ಜೀವಿಸುತ್ತಿಲ್ಲ. ಭಗವಂತನ ಸಂಕಲ್ಪಕ್ಕನುಗುಣವಾಗಿ ಮಾಡಬೇಕಾದುದನ್ನು ಮಾಡಲು ಮಾತ್ರ ನಾವಿಲ್ಲಿದ್ದೇವೆ. ಭಗವಂತನ ಸಂಕಲ್ಪವು ತನ್ನ ದಿವ್ಯ ಸತ್ಯವನ್ನು ಪ್ರಕಟಿಸುವಂಥ ಜಗತ್ತೊಂದನ್ನು ಸೃಷ್ಟಿಸುವುದು ಈ ಯೋಗದ ಉದ್ದೇಶ. ಈ ದಿವ್ಯ ಸತ್ಯವು ಮಾನವನ ಅಜ್ಞಾನದಿಂದ ವಿಕೃತಗೊಳ್ಳುವುದಕ್ಕಾಗಲಿ ಪ್ರಾಣ ಶಕ್ತಿಯ ಆಶೆ - ಆಕಾಂಕ್ಷೆಗಳಿಂದ ಹದಗೆಟ್ಟು ಹೋಗುವುದಕ್ಕಾಗಲಿ ಅವಕಾಶವಿರದಂತೆ

ಎಚ್ಚರವಹಿಸುವುದು ಈ ಯೋಗ ಸಾಧಕರ ಕರ್ತವ್ಯವಾಗಿದೆ. 'ಸಮಗ್ರ ಯೋಗ'ದ ಸಾಧಕನು ಮಾಡಬೇಕಾದ ಕಾರ್ಯವು ಆತನ ಸ್ವಂತದ್ದಲ್ಲ. ತನ್ನ ಸ್ವಂತದ್ದಾದ ಕಾರ್ಯಕ್ಕೆ ತನ್ನವೇ ಆದ ಕರಾರುಗಳನ್ನು ಆತನು ಹಾಕಿಕೊಳ್ಳಬಹುದು; ಆದರೆ ಆತನು ಮಾಡಬೇಕಾದ ಭಗವಂತನ ಕಾರ್ಯಕ್ಕೆ ಭಗವಂತನ ಕರಾರುಗಳನ್ನು ಆತನು ಪಾಲಿಸಬೇಕಾಗುತ್ತದೆ. ಈ ಯೋಗ ಸಾಧನೆಯ ಮೂಲಕ ನಾವು ಅರಸುತ್ತಿರುವುದು ಭಗವಂತನ ಪ್ರಕಟಣೆಯನ್ನು ಮಾತ್ರ. ಭಗವಂತನ ಈ ಪ್ರಕಟಣೆಯಲ್ಲಿ ನಮ್ಮ ಆಧ್ಯಾತ್ಮಿಕ ಮುಕ್ತಿ, ಪರಿಪಕ್ವತೆ ಹಾಗೂ ಪರಿವರ್ತನೆಗಳು ಈ ಭಗವತ್ ಪ್ರಕಟಣೆಯ ಭಾಗವಾಗಿರುವುವಲ್ಲದೆ, ಅದರ ಪರಿಣಾಮವೂ ಆಗಿರುತ್ತವೆ. ಆದರೆ ನಮ್ಮ ಈ ಆಧ್ಯಾತ್ಮಿಕ ಮುಕ್ತಿ ಮುಂತಾದವುಗಳ ಉದ್ದೇಶವು ಯಾವ ಬಗೆಯ ಅಹಂಕಾರ ದೃಷ್ಟಿಯಿಂದಾಗಲಿ ಸ್ವಾರ್ಥಪರತೆಯಿಂದಾಗಲಿ ಕಲುಷಿತವಾಗುವುದಿಲ್ಲ.

ಈ ಯೋಗವು ಕೇವಲ ಭಗವತ್-ಸಾಕ್ಷಾತ್ಕಾರಕ್ಕಾಗಿ ಮಾತ್ರ ಇರದೆ, ಅಂತರಂಗ - ಬಹಿರಂಗ ಜೀವನಗಳೆರಡರ ಪರಿವರ್ತನೆಗಾಗಿ ಮತ್ತು ಅವನ್ನು ಸಂಪೂರ್ಣವಾಗಿ ಭಗವಂತನಿಗೆ ನಿವೇದಿಸುವುದಕ್ಕಾಗಿ ಇರುತ್ತದೆ. ಭಗವತ್-ಚೇತನವು ಪ್ರಕಟವಾಗಲು ಮತ್ತು ಅಂತರಂಗ - ಬಹಿರಂಗ ಜೀವನದ ಪರಿವರ್ತನೆ ಮತ್ತು ನಿವೇದನೆಗಳು ಭಗವತ್‌ಕಾರ್ಯದ ಒಂದು ಭಾಗವಾಗಲು ಯೋಗ್ಯವಾಗುವವರೆಗೆ, ಈ ಯೋಗ ಸಾಧನೆ ಸಾಗಬೇಕು. ಇದೆಲ್ಲದರ ಅರ್ಥವೇನೆಂದರೆ, ಶ್ರೀ ಅರವಿಂದರ ಈ ಯೋಗ ಸಾಧನೆ ಒಂದು ಬಗೆಯ ಆಂತರಿಕ ಶಿಕ್ಷಣ ಹಾಗೂ ಶಿಸ್ತು. ಇದು ತುಂಬ ಶ್ರಮ ವಹಿಸಿ ಪ್ರಯತ್ನಪೂರ್ವಕವಾಗಿ ಸಾಧಿಸಬೇಕಾದುದು ; ನೈತಿಕ ಹಾಗೂ ದೈಹಿಕ ತಪಸ್ಸುಗಳಿಗಿಂತ ಇದು ಕಷ್ಟಕರವೆಂದು ಶ್ರೀ ಅರವಿಂದರು ಹೇಳುತ್ತಾರೆ.

ಈ ಮೊದಲು ಅನುಸರಿಸುತ್ತಿದ್ದ ಯೋಗ ಪಥಗಳ ಸಾಧನೆಯಲ್ಲಿ ಭಗವಂತನೊಂದಿಗೆ ಒಂದಾಗಿರುವ ಆತ್ಮಾನುಭವವನ್ನು ಮಾತ್ರ ಅರಸಲಾಗುತ್ತಿತ್ತು. ಈ ಆತ್ಮಾನುಭವಕ್ಕೆ ಅಡ್ಡಿಯಾಗದಷ್ಟು ಮಾತ್ರಕ್ಕೆ, ಸಾಧಕನ ವ್ಯಕ್ತಿ ಸ್ವಭಾವವು ಪರಿವರ್ತನೆ ಹೊಂದಿದರೆ ಸಾಕು ಎನ್ನುತ್ತಿದ್ದರು. ಇಡಿಯ ಸ್ವಭಾವದ ಪರಿವರ್ತನೆಯನ್ನು ಎಂದರೆ ದೈಹಿಕ ಚೇತನದವರೆಗೆ ಪರಿವರ್ತನೆಯನ್ನು ಕೆಲವರು ಮಾತ್ರ ಸಾಧಿಸುತ್ತಿದ್ದರು. ಅದೊಂದು ಬಗೆಯ 'ಸಿದ್ಧಿ'; ಪೃಥ್ವೀ ಚೇತನದಲ್ಲಿಯ ಹೊಸದೊಂದು 'ಸ್ವಭಾವ'ದ ಆವಿಷ್ಕಾರ ಸಾಧನೆಯಂತೂ ಅದಲ್ಲ.

ಇಂದಿನ ಮಾನವನು ತನ್ನ ತಾನರಿತಿಲ್ಲ ಎಂದು ಶ್ರೀ ಅರವಿಂದರು ಹೇಳಿದ್ದಾರೆ. 'ತಾನು' ಎಂದರೆ ಯಾರು ? ಎಂಬುದನ್ನು ಅರಿತುಕೊಳ್ಳುವ ಹಂತವನ್ನೆ ಮಾನವನಿಂದು ತಲುಪಿಲ್ಲ ಎಂಬುದು ಅವರ ಅಭಿಪ್ರಾಯ. ಉತ್ಕ್ರಾಂತಿಯ ಆರೋಹಣದಲ್ಲಿ ಮಾನವನಿನ್ನೂ ಕೆಳ ಹಂತದಲ್ಲಿಯೇ ಇದ್ದಾನೆ. ಪ್ರಾಣಿ - ಸ್ತರದಿಂದ ಹೊರ ಬಂದ ಮಾನವ ಮನಸ್ಸು ಇನ್ನೂ ಪ್ರಾಣಿತನವನ್ನು ಬಹುಮಟ್ಟಿಗೆ ಉಳಿಸಿಕೊಂಡಿರುವುದರಿಂದ, ಅದರ ರೂಪಾಂತರ ಇಲ್ಲವೆ ಪರಿವರ್ತನೆಯ ಕಾಲವಿನ್ನೂ ಬಲುದೂರ. ಶ್ರೀ ಅರವಿಂದರ 'ಸಮಗ್ರ ಯೋಗ'ದ ಗುರಿಗಳಲ್ಲಿ ಮನದ ಪರಿಪೂರ್ಣ ರೂಪಾಂತರವೂ ಒಂದು. ಈ ಬಗ್ಗೆ ಶ್ರೀಮಾತೆಯವರು ಹೇಳುವುದಿದು: ಪ್ರಕೃತಿಯಲ್ಲಿ ಆರೋಹಣ ವಿಕಾಸ ಅಥವಾ ಉತ್ಕ್ರಾಂತಿ ಎಂಬುದೊಂದಿದೆ : ಶಿಲೆಯಿಂದ ಸಸ್ಯಕ್ಕೆ, ಸಸ್ಯದಿಂದ

ಪ್ರಾಣಿಗೆ, ಪ್ರಾಣಿಯಿಂದ ಮಾನವನವರೆಗೆ ಏರುತ್ತ ಹೋದ ಉತ್ಕ್ರಾಂತಿಯಿದು. ಈ ಆರೋಹಣ ವಿಕಾಸದ ಏಣಿಯ ತುತ್ತ ತುದಿಯ ಕೊನೆಯ ಮೆಟ್ಟಿಲಿನಲ್ಲಿ ಈಗ ಮಾನವನಿದ್ದಾನೆ. ಮತ್ತು ಆತನು ಈ ಪೃಥ್ವಿಯ ಮೇಲೆ ತನಗಿಂತ ಮಿಗಿಲಾದುದಾವುದೂ ಇಲ್ಲವೆಂದೇ ಭಾವಿಸಿದ್ದಾನೆ. ಇಲ್ಲಿ ಆತನ ತಿಳುವಳಿಕೆ ತಪ್ಪಿದೆ. ತನ್ನ ಭೌತಿಕ ಪ್ರಕೃತಿಯಲ್ಲಿ ಆತನಿನ್ನೂ ಇಡಿಯಾಗಿ ಪ್ರಾಣಿಯೇ ಆಗಿದ್ದಾನೆ : ಯೋಚನೆ ಮಾಡುವ ಮತ್ತು ಮಾತನಾಡುವ ಪ್ರಾಣಿಯಾತ. ದೈಹಿಕ ಅಭ್ಯಾಸಗಳಲ್ಲಿ ಮತ್ತು ಸಹಜ ಪ್ರವೃತ್ತಿಗಳಲ್ಲಿ ಆತನಿನ್ನೂ ಪ್ರಾಣಿಯೇ. ವಿರಾಟ್-ಸ್ವರೂಪದಲ್ಲಿ ಯೋಗ ಮಾಯೆಯಾಗಿ, ಬೃಹತ್ ಪ್ರಮಾಣದ ಯೋಗ ಕ್ರಿಯೆಯಲ್ಲಿ ನಿರಂತರವಾಗಿ ತೊಡಗಿರುವ ಪ್ರಕೃತಿ ಮಾತೆಗೆ ಇಂಥದೊಂದು ಅಪೂರ್ಣ ಫಲಿತಾಂಶದಿಂದ ತೃಪ್ತಿಯಿಲ್ಲ : ಇಂದು ಪ್ರಾಣಿಗಿಂತ ಮನುಷ್ಯ ಯಾವ ಅಂತರದಲ್ಲಿರುವನೋ, ಹಾಗೆ ಮನುಷ್ಯನಿಂದ ಅಷ್ಟು ಅಂತರದಲ್ಲಿರುವ 'ಅತಿಮಾನವ'ನನ್ನು ಸೃಷ್ಟಿಸುವ ಯತ್ನದಲ್ಲಿ ಆಕೆ ತೊಡಗಿದ್ದಾಳೆ. ಬರಲಿರುವ ಈ 'ಅತಿಮಾನವ'ನು ಬಾಹ್ಯ ರೂಪದಲ್ಲಿ ಈಗಿನ ಮನುಷ್ಯನಂತೆಯೆ ಇರುವುದಾಗಿ, ಆತನ ಚೇತನವು ಮಾತ್ರ ಮಾನಸ ಹಂತದಿಂದಾಚೆ ಏರುತ್ತಾ ಹೋಗುವುದಲ್ಲದೆ, ಅಜ್ಞಾನದ ಬಂಧನದಿಂದ ಮುಕ್ತವಾಗಿರುವುದು. ಶ್ರೀ ಅರವಿಂದರು ಮನುಷ್ಯರಿಗೆ ಈ ಸತ್ಯವನ್ನು ಬೋಧಿಸುವುದಕ್ಕೆಂದು ಈ ಭೂಮಿಗೆ ಇಳಿದು ಬಂದರು. ಇಂದಿನ ಮಾನವನು ಮಾನಸಿಕ ಚೇತನದಲ್ಲಿಯೇ ಜೀವಿಸುತ್ತಿರುವ, ಆದರೆ ಬದಲಾಗಬೇಕಾಗಿರುವ, ಸಂಧಿಕಾಲದ ಅವಸ್ಥೆಯ ಪ್ರಾಣಿಯಾಗಿದ್ದಾನೆಂದೂ ಹೊಸತೊಂದು ಸತ್ಯ ಚೇತನಾವಸ್ಥೆಯನ್ನು ಪಡೆಯಲಿರುವ ಸಾಧ್ಯತೆಯುಳ್ಳವನಾಗಿದ್ದಾನೆಂದೂ ಮನುಷ್ಯನಿಗೆ ತಿಳಿಸಿ ಹೇಳುವುದಕ್ಕೆಂದು ಅವರು ಅವತರಿಸಿದರು. ಬರಲಿರುವ ಈ 'ಅತಿಮಾನವ'ನು ಪರಿಪೂರ್ಣ ಸಾಮರಸ್ಯವುಳ್ಳ, ಉತ್ತಮ, ಸುಂದರ ಹಾಗೂ ಸುಖಮಯವಾದ ಜೀವನವನ್ನು ನಡೆಸಬಲ್ಲವನಾಗಿ, ತುಂಬ ಜಾಗೃತ ಹಾಗೂ ಚೈತನ್ಯಭರಿತ ಜೀವಿಯಾಗಿ ಬಾಳುವನು. ಭೂಮಿಯ ಮೇಲಿನ ತಮ್ಮ ಜೀವನದುದಕ್ಕೂ ಶ್ರೀ ಅರವಿಂದರು ತಮ್ಮೊಳಗೆ ಈ ಬಗೆಯ ಚೇತನಾವಸ್ಥೆಯನ್ನು ಸ್ಥಿರವಾಗಿ ಹೊಂದಲು ತಮ್ಮೆಲ್ಲ ವೇಳೆಯನ್ನೂ ಮೀಸಲಿರಿಸಿದ್ದರು. ಇದನ್ನು 'ಅತಿಮಾನಸ ಚೇತನಾವಸ್ಥೆಯೆಂದು ಅವರು ಕರೆದರು. ಇಂಥದನ್ನು ಸಿದ್ಧಿಸಿಕೊಳ್ಳುವುದಕ್ಕೆ ತಮ್ಮ ಸುತ್ತ ಮುತ್ತಲು ಸೇರಿದ್ದವರಿಗೆಲ್ಲ ನೆರವು ನೀಡಿದರು .....'-ಹೀಗೆಂದು ಶ್ರೀಮಾತೆ ಹೇಳಿದ್ದಾರೆ. ಹಾಗೆಯೆ ಮುಂದುವರಿಯುತ್ತ, ಸಾಧಕರನ್ನುದ್ದೇಶಿಸಿ ಹೀಗೆ ಅವರು ಉದ್ಗರಿಸಿದ್ದಾರೆ : "ಸಾಮಾನ್ಯ ಮಾನವ ಜೀವಿಗಳಾಗಿ, ಇಲ್ಲವೆ ಕೆಲಮಟ್ಟಿಗೆ ಮಾತ್ರ ವಿಕಾಸಗೊಂಡ ಪ್ರಾಣಿಗಳಾಗಿ ಬಾಳಲು ನಿಮಗೆ ಇಚ್ಛೆಯಿಲ್ಲದಿದ್ದರೆ, ಶ್ರೀ ಅರವಿಂದರ ದರ್ಶನದ 'ಅತಿಮಾನಸ' ಆದರ್ಶವನ್ನು ಸಿದ್ಧಿಸಿಕೊಂಡು, ಹೊಸ ಜನಾಂಗದ ಮನುಷ್ಯರಾಗಿ ಜೀವಿಸುವ, ಹೊಸತೊಂದು ಪೃಥ್ವಿಯ ಮೇಲೆ ಹೊಚ್ಚ ಹೊಸತೊಂದು ಉನ್ನತ ಜೀವನವನ್ನು ನಡೆಸುವ ಇಚ್ಛೆ ನಿಮ್ಮದಾಗಿದ್ದರೆ, ಅದೆಲ್ಲವೂ ನಿಮ್ಮ ನಿಜವಾದ ಸಂಕಲ್ಪ ಶಕ್ತಿಯನ್ನೂ ನಿಮ್ಮ ಪಾರದರ್ಶಕ ಪ್ರಾಮಾಣಿಕತೆಯನ್ನೂ ಅವಲಂಬಿಸಿದೆ'- ಎಂದಿದ್ದಾರೆ. ಈಗ ಮತ್ತೆ ಶ್ರೀ ಅರವಿಂದರ 'ಸಮಗ್ರ ಯೋಗ'ದ ಗುರಿಗಳಲ್ಲಿ ಒಂದಾದ ಮಾನವ ಮನದ ಪರಿಪೂರ್ಣ ರೂಪಾಂತರದ ವಿಚಾರಕ್ಕೆ ಮರಳುವ : ಮಾನವರಾದ ನಮ್ಮ 'ಅಸ್ತಿತ್ವ'ದ ಅಂಗಗಳು ವಿವಿಧ. ಅವುಗಳಲ್ಲಿ ಮನಸ್ಸು ಒಂದಂಗ ಮಾತ್ರ. ಹೀಗಿದ್ದರೂ

ಈ 'ಅಸ್ತಿತ್ವ' ಅಥವಾ ಸತ್ತೆಯ ವಿವಿಧ ಅಂಗಾಂಗಗಳನ್ನೆಲ್ಲ ಒಟ್ಟುಗೂಡಿಸಿ, ಅವುಗಳನ್ನು 'ಮನಸ್ಸು' ಎಂಬ ಒಂದಂಗದಲ್ಲಿಯೆ ಸಮಾವೇಶಗೊಳಿಸಿ ಮಾತನಾಡುವ ಅಭ್ಯಾಸ ಇಂದಿನ ಮಾನವನದಾಗಿದೆ. ನಮ್ಮ ಪ್ರಕೃತಿಯ ಜಟಿಲ ಸ್ವರೂಪವನ್ನು ಸರಿಯಾಗಿ ಅರ್ಥಮಾಡಿಕೊಂಡು, ಅದು ಸರಿಯಾದ ಮಾರ್ಗದಲ್ಲಿ ಚಲಿಸುವಂತೆ ಮಾಡಿ, ಅದನ್ನು ನಿಯಂತ್ರಿಸುವ ಜ್ಞಾನವನ್ನು ಪಡೆದುಕೊಳ್ಳುವುದು ಶ್ರೀ ಅರವಿಂದರ 'ಸಮಗ್ರ ಯೋಗ'ದ ತಳಹದಿಯ ಅರಿವಿನ ಒಂದು ಭಾಗವಾಗಿದೆ.

ನಮ್ಮೊಳಗೆ ಅನೇಕ ಅಂಗಾಂಗಗಳಿವೆ. ಪ್ರತಿಯೊಂದು ಅಂಗವೂ ನಮ್ಮ ಚೈತನ್ಯದ ಚಲನೆಗಳಾಗಿರುವ ವಿಚಾರ, ಸಂಕಲ್ಪ, ಸಂವೇದನೆ, ಭಾವನೆ, ಕ್ರಿಯೆ ಮುಂತಾದವುಗಳಿಗೆ ಮೂಲ ಕಾರಣವಾಗಿರುತ್ತದೆ. ನಮ್ಮ ಅಂತರಂಗದ ಇವೆಲ್ಲ ಆವೇಗಗಳ ಪ್ರವಾಹ ಗತಿಯನ್ನೂ ಅವುಗಳ ಮೂಲ ಉಗಮ ಸ್ಥಾನಗಳನ್ನೂ ಅರಿತುಕೊಳ್ಳುವುದು ತೀರ ಆವಶ್ಯಕ. ಈ ಅರಿವಿಲ್ಲದಿದ್ದರೆ, ಅವುಗಳ ಗೊಂದಲಮಯ ಪರಿಣಾಮಗಳು ಹೊರಗೆ ಗೋಚರಿಸಿದಾಗ, ಅವುಗಳನ್ನು ತಾತ್ಕಾಲಿಕವಾಗಿ ಅದಲು-ಬದಲು ಮಾಡಿ, ಒಂದು ಅಭದ್ರ ವ್ಯವಸ್ಥೆಗೆ ತರಲು ನಿಯಂತ್ರಣವೊಂದನ್ನು ಅವುಗಳ ಮೇಲೆ ಹೇರಲು ಮಾತ್ರ ನಾವು ಯತ್ನಿಸುತ್ತೇವೆ. ಆದರೆ ಇದರಿಂದಾವ ಪ್ರಯೋಜನವೂ ಇಲ್ಲ.

ನಮ್ಮ 'ಸತ್ತೆ'ಯ ವಿವಿಧಾಂಗಗಳು ದಿವ್ಯ ಪ್ರಕಾಶದತ್ತ ಉನ್ಮುಖವಾಗಿ, ದಿವ್ಯ ಚೇತನದ ಬೆಳಕನ್ನು ಮೇಲಿಂದ ಕೆಳಗಿಳಿಸಿಕೊಂಡು, 'ಅಂತರಾತ್ಮ'ನನ್ನು ಮಾನಸಿಕ, ಪ್ರಾಣಿಕ, ದೈಹಿಕ ಚೇತನಗಳ ಮೇಲ್ಪಾತಳಿಯ ಮೇಲೆ ಬರುವಂತೆ ಮಾಡಿಕೊಳ್ಳುವುದು ಮತ್ತು ಅಭೀಪ್ಸೆಯ ಜ್ಯೋತಿಯನ್ನು ಪ್ರಖರವಾಗಿ ಹೊತ್ತಿಸಿಕೊಂಡು ಮನಸ್ಸನ್ನು ಅಧ್ಯಾತ್ಮದ ಅರಿವಿನತ್ತ ಎಚ್ಚರಗೊಳ್ಳುವಂತೆ ಮಾಡಿ, ಪ್ರಾಣಸತ್ತೆ ಉಜ್ವಲಿಸುವಂತೆ ಮಾಡುವುದೇ ಈ ಯೋಗ ಸಾಧನೆಯ ಮೊದಲ ಹೆಜ್ಜೆ.

ಶ್ರೀ ಅರವಿಂದರ ತತ್ವಬೋಧೆ ಮತ್ತು ಸಮಗ್ರ ಯೋಗ - ಇವುಗಳನ್ನು ಕುರಿತು ಶ್ರೀ ಮಾತೆಯವರು ಸರಳ ಸುಂದರ ಶೈಲಿಯಲ್ಲಿ ಹೀಗೆ ವಿವರಿಸಿದ್ದಾರೆ.

1. ಅಜ್ಞಾನ ಬಂಧನದಿಂದ ಬಿಡುಗಡೆ ಹೊಂದಿ, ಜೀವನದ ದುಃಖ ಹಾಗೂ ಯಾತನೆಗಳಿಂದ ಮುಕ್ತಿ ಪಡೆಯುವುದು ಪ್ರಾಚೀನ ಯೋಗಗಳ ಉದ್ದೇಶವಾಗಿತ್ತು. ಈ ಜಗತ್ತು ಒಂದು ಮಾಯೆ, ಇಲ್ಲವೆ ಅರ್ಥರಹಿತ ಭಗವಲ್ಲೀಲೆ. ನಾವು ಇದರಿಂದ ತಪ್ಪಿಸಿಕೊಂಡು ಆಧ್ಯಾತ್ಮಿಕ ಪ್ರಜ್ಞೆಯಲ್ಲಿ ಮೇಲೇರಬೇಕೆಂಬುದೇ ಪ್ರಾಚೀನರ ನಂಬುಗೆಯಾಗಿತ್ತು.

2. ಶ್ರೀ ಅರವಿಂದರ 'ಸಮಗ್ರ ಯೋಗ'ವು ನಮ್ಮೊಳಗಿನ ಚೇತನವನ್ನು ರೂಪಾಂತರಗೊಳಿಸುವುದರ ಜತೆಗೆ ಬಾಹ್ಯ ಜೀವನವನ್ನು ರೂಪಾಂತರಗೊಳಿಸುವುದು. ನಮ್ಮ ಚೇತನದಂತೆಯೆ ನಮ್ಮ ಇಡಿಯ ಪ್ರಕೃತಿಯೂ ಎಂದರೆ ನಮ್ಮ ಮನ, ಪ್ರಾಣ ಮತ್ತು ದೇಹಗಳೂ ದಿವ್ಯ ಚೇತನದೊಂದಿಗೆ ಸಂಯೋಗ ಹೊಂದಬೇಕು. ಶ್ರೀ ಅರವಿಂದರು ವಿವರಿಸುವ ಆಧ್ಯಾತ್ಮಿಕ ರೂಪಾಂತರವು ಸಮಗ್ರವಾದುದು. ಈ ರೂಪಾಂತರದ ಪರಿಣಾಮವಾಗಿ

ದಿವ್ಯ ಶಾಂತಿ, ಶಕ್ತಿ, ಪ್ರಭೆ, ಆನಂದ-ಇವು ನಮ್ಮ ಪ್ರತಿಯೊಂದು ವಿಚಾರ, ಭಾವನೆ, ಕೃತಿಗಳಲ್ಲಿ ವ್ಯಕ್ತವಾಗುತ್ತವೆ. ಜೀವನದ ಎಲ್ಲ ಶಕ್ತಿ - ಸಾಮರ್ಥ್ಯಗಳು ಪರಿಪೂರ್ಣಗೊಳ್ಳುತ್ತವೆ, ವಿಕಾಸಗೊಳ್ಳುತ್ತವೆ. ಭಗವಂತನಿಗೆ ನಮ್ಮದೆಲ್ಲವನ್ನೂ ಸಮರ್ಪಿಸಿಕೊಳ್ಳುವುದೇ ಈ ವಿಕಾಸ-ಸಿದ್ಧಿಗೆ ದಾರಿ. ಕೊನೆಯಲ್ಲಿ, ನಮ್ಮ ಭೌತಿಕ ಶರೀರವೂ ದಿವ್ಯ ಶರೀರವಾಗಿ ಪರಿಣಮಿಸುವುದು. ಈ ಜೀವನದ ಮುಖ್ಯ ಗುರಿಯೆಂದರೆ, - ನಮ್ಮ ದಿವ್ಯ ದೇಹದಲ್ಲಿ ದಿವ್ಯ ಜೀವನವನ್ನು ಸಾಧಿಸಿಕೊಳ್ಳುವುದು. ಅನಂತರ, ಭಗವಂತನ ಘನೋದ್ದೇಶವಾಗಿರುವ ನೂತನವಾದ ಅಧ್ಯಾತ್ಮ-ಜಗತ್ತನ್ನು ಸೃಷ್ಟಿಸುವಲ್ಲಿ ಮತ್ತು 'ಅತಿ ಮಾನವ'ರನ್ನು ಈ ಧರೆಗೆ ಬರಮಾಡಿಕೊಳ್ಳುವಲ್ಲಿ ಸಾಧನೆ ನಡೆಸುವುದು.

3. ಶ್ರೀ ಅರವಿಂದರ ಈ ಯೋಗಸಾಧನೆಯ ಮುಖ್ಯ ಸ್ವರೂಪವೇನೆಂದರೆ, - ಅಭೀಪ್ಸೆ ಹಾಗೂ ಚಿತ್ತೈಕಾಗ್ರತೆಗಳ ಮೂಲಕ ಭಗವಂತನತ್ತ ನಮ್ಮ ಆತ್ಮವನ್ನು ತೆರೆದಿರಿಸಿಕೊಳ್ಳುವುದು ಮತ್ತು ಈ ಸಾಧನೆಗೆ ವಿರೋಧಕವಾದಂಥ ಮನೋದೌರ್ಬಲ್ಯಗಳೆಲ್ಲವನ್ನು ನಿವಾರಿಸಿಕೊಳ್ಳುವುದು. ಮುಖ್ಯವಾಗಿ ಶ್ರದ್ಧೆ, ಅಭೀಪ್ಸೆ, ಸಮರ್ಪಣೆಗಳಿಂದ ನಮ್ಮ ಅಂತರಾತ್ಮ ತೆರೆದುಕೊಳ್ಳುವುದೆಂದು ಶ್ರೀ ಅರವಿಂದರ ದೃಢ ನಂಬುಗೆ.

4. ನಮ್ಮೊಳಗಿನ 'ಅಂತರಾತ್ಮ' ಅಥವಾ 'ಚೈತ್ಯ ಪುರುಷ' (Psychic being) ನು ನಮ್ಮೊಳಗಿನ 'ಜೀವಾತ್ಮ'ದ ಇಲ್ಲವೆ ದೈವೀ ಸಾನ್ನಿಧ್ಯದ ಪ್ರಭಾವದಿಂದ ಜಾಗೃತಗೊಳ್ಳುತ್ತಾನೆ. ಆದ್ದರಿಂದ ಹೀಗೆ ಜಾಗೃತಗೊಳ್ಳಲು ಹೃದಯಾಂತರಾಳದಲ್ಲಿಯ 'ಚೈತ್ಯ ಪುರುಷ'ನನ್ನು ಕುರಿತು ಯಾವೊಂದು ದೇವತಾ ಪ್ರತಿಮೆ ಇಲ್ಲವೆ ಪ್ರತೀಕದ ಮೂಲಕ ಚಿತ್ತೈಕಾಗ್ರತೆಯ ಸಾಧನೆಯಿಂದ ಧ್ಯಾನಾಸಕ್ತರಾಗಬೇಕು. ಕೆಲ ಕಾಲದ ಈ ಸಾಧನೆಯ ಪರಿಣಾಮವಾಗಿ 'ಚೈತ್ಯ ಪುರುಷ'ನು ತೆರೆಮರೆಯಿಂದ ಹೊರ ಬರುತ್ತಾನೆ. ಮತ್ತು ಬಾಹ್ಯಸತ್ತೆ (outer being) ಯನ್ನು ದಿವ್ಯತೆಯತ್ತ ಹೊರಳಿಸುತ್ತಾನೆ. ಇದೇ ನಮ್ಮ ಪ್ರಕೃತಿಯ 'ಚೈತ್ಯಾತ್ಮಕ ರೂಪಾಂತರ (Psychic Transformation) / ಎರಡನೆಯದಾಗಿ, ಚಿತ್ತೈಕಾಗ್ರತೆಯ ಈ ಧ್ಯಾನವನ್ನು ಊರ್ಧ್ವಮುಖಿಯಾಗಿಸಿ, ಉನ್ನತ ಪ್ರಜ್ಞೆಯ ಶಕ್ತಿ-ಸಾಮರ್ಥ್ಯಗಳನ್ನು ಎಂದರೆ ಅದರ ಶಾಂತಿ, ಪ್ರಭೆ, ಶಕ್ತಿ, ಜ್ಞಾನ ಮತ್ತು ಆನಂದ, ಇವುಗಳನ್ನು ಅವತರಣಗೊಳಿಸುವುದು. ಈ ಅವತರಣವು ಮಾನವನ ಇಡಿಯ ಸತ್ತೆಯನ್ನು ಆಧ್ಯಾತ್ಮಿಕವಾಗಿ ರೂಪಾಂತರಗೊಳಿಸುವುದಾಗಿದೆ. ಇದನ್ನು 'ಆಧ್ಯಾತ್ಮಿಕ ರೂಪಾಂತರ' / (Spiritual Transformation) ಎಂದು ಹೇಳುತ್ತಾರೆ. ಕೊನೆಯ ಪರಿವರ್ತನೆಯೆಂದರೆ,-'ಅತಿಮಾನಸ ಅವತರಣ'. ಇದು ಭಗವಂತನ ಸೃಜನ ಶಕ್ತಿ, ಇದು ಮಾನವನ ಜೀವನದ ಮೇಲೆ ಪ್ರಭಾವ ಬೀರಿ, ಮಾನವನನ್ನು ದಿವ್ಯ ಮಾನವ ಇಲ್ಲವೆ 'ಅತಿಮಾನವ'ನನ್ನಾಗಿಸುತ್ತದೆ. ಇದೇ ಮುಂದೆ ಪೃಥ್ವಿಯ ಮೇಲಿನ ಜೀವನವನ್ನು ದಿವ್ಯ ಜೀವನವನ್ನಾಗಿಸುತ್ತದೆ. ಮರ್ತ್ಯ ಜೀವನದ ಅತ್ಯಂತ ಶ್ರೇಷ್ಠ ಸಿದ್ಧಿಯಿದು.

'ಸಮಗ್ರಯೋಗ'ದ ಸ್ವರೂಪ-ಲಕ್ಷಣಗಳನ್ನು ಸಾರಾಂಶ ರೂಪದಲ್ಲಿ ಹೀಗೆ ವಿವರಿಸಬಹುದಾಗಿದೆ:-

1. ಮಾನವ ಜೀವನವನ್ನು ದಿವ್ಯತೆಯ ಪೂರ್ಣತೆ (Divine Perfection)ಗೆ ತಂದು ಮುಟ್ಟಿಸುವುದೇ ಸಮಗ್ರ ಯೋಗದ ಗುರಿ.

2. ನಿಜವಾದ ಆಧ್ಯಾತ್ಮಿಕತೆ ಜೀವನವನ್ನು ತೊರೆದು ಪಲಾಯನ ಮಾಡುವುದಲ್ಲ. ಜೀವನವನ್ನು ಪರಿಪೂರ್ಣಗೊಳಿಸುವುದು - ದಿವ್ಯತೆಯ ಪರಿಪೂರ್ಣತೆಯನ್ನು ಅದಕ್ಕೆ ಒದಗಿಸಿಕೊಡುವುದು.

3. ಭಗವಂತನು ಎಲ್ಲೆಲ್ಲೂ ಇರುವನೆಂಬುದನ್ನಷ್ಟೆ ಅರಿತರೆ ಸಾಲದು. ಜಗದ ಜೀವನವನ್ನೆಲ್ಲ ಇಡಿಯಾಗಿ ರೂಪಾಂತರಗೊಳಿಸುವುದು ಮುಖ್ಯ ಕಾರ್ಯ.

4. ಈ ಯೋಗವು ಜೀವನದ ಶಕ್ತಿ-ಸಾಮರ್ಥ್ಯಗಳನ್ನು ಬಳಸಕೂಡದೆಂದು ಹೇಳುವುದಿಲ್ಲ. ಈ ಶಕ್ತಿ-ಸಾಮರ್ಥ್ಯಗಳ ಪರಿವರ್ತನೆಯನ್ನು ಸಾಧಿಸಬೇಕು. ಇದನ್ನೇ 'ಸಮಗ್ರ ರೂಪಾಂತರ' ಎನ್ನುವುದು.

5. ವೈಯಕ್ತಿಕ ಮುಕ್ತಿಯನ್ನು ಸಾಧಿಸಿಕೊಂಡು ಸುಮ್ಮನೆ ಕುಳಿತುಕೊಳ್ಳುವುದನ್ನು ಈ ಯೋಗವು ಒಪ್ಪುವುದಿಲ್ಲ. ಇದು ನೇತ್ಯರ್ಥಕ (Negative) ಪ್ರವೃತ್ತಿ . ನಮ್ಮ ಸುತ್ತಣ ಸಮಾಜ ಮತ್ತು ಜಗತ್ತು ಸಾಕ್ಷಾತ್ಕಾರ ಪಡೆದವರಿಂದ ಪ್ರಗತಿಪರ ಪರಿವರ್ತನೆಯನ್ನು ನಿರೀಕ್ಷಿಸುತ್ತಿರುತ್ತದೆ. ಆದ್ದರಿಂದ 'ಪೂರ್ಣ ಯೋಗ'ವು ಕ್ರಿಯೆ ಮತ್ತು ಧ್ಯಾನಗಳೆರಡರ ಸಮತೂಕದ ಐಕ್ಯ ಸಾಧನೆಯನ್ನು ಕಾಯ್ದು ಕೊಳ್ಳಲು ಬೋಧಿಸುತ್ತದೆ.

6. ಮಾನವನ ಪ್ರಕೃತಿ-ಯ ಪರಿವರ್ತನೆಯನ್ನು ಸಾಧಿಸದ ಯೋಗದಿಂದೇನು ಪ್ರಯೋಜನ ? ಎಂದು ಪ್ರಶ್ನಿಸುತ್ತಾರೆ ಶ್ರೀ ಅರವಿಂದರು.

7. 'ಪೂರ್ಣ ಯೋಗ'ದಲ್ಲಿ ಸಾಧನೆ ಮತ್ತು ಬಾಹ್ಯ ಜೀವನ ಇವುಗಳ ನಡುವೆ ಯಾವ ಭೇದವೂ ಇಲ್ಲ. ಜೀವನದ ಪ್ರತಿ ಕ್ಷಣದಲ್ಲೂ ಸತ್ಯಶೋಧನೆ ಮತ್ತು ಅದರ ಸಾಧನೆ ನಿರಂತರವಾಗಿ ನಡೆಯಬೇಕು.

8. ಈ ಜೀವನದಲ್ಲಿಯೆ ದಿವ್ಯತ್ವವನ್ನು ಕಂಡುಕೊಳ್ಳಬೇಕು. ಈ ಅನ್ವೇಷಣೆಯಿಂದಲೆ ಜೀವನದ ಪರಿವರ್ತನೆ ಸಾಧ್ಯ.

ಒಟ್ಟಿನಲ್ಲಿ, ಈ ಜೀವನದಲ್ಲಿಯೆ ನಾವು ಗೆಲುವನ್ನು ಸಾಧಿಸಬೇಕು. 'ಈಸಬೇಕು, ಇದ್ದು ಜಯಿಸಬೇಕು' ಜೀವನದ ಎಲ್ಲ ಪ್ರಸಂಗಗಳಲ್ಲೂ ಒಬ್ಬೊಂಟಿಗನಾಗಿ ಭಗವಂತನೊಂದಿಗೆ ಎಂದರೆ 'ನಿತ್ಯ' ದೊಂದಿಗೆ ಮತ್ತು 'ಅನಂತ' ದೊಂದಿಗೆ ನಿರಂತರವಾಗಿ ಜೀವಿಸುವುದು ಹೇಗೆಂಬುದನ್ನು 'ಸಮಗ್ರ ಯೋಗ'ವು ನಮಗೆ ಕಲಿಸುತ್ತದೆ.

9. ಕೊನೆಯದಾಗಿ, 'ಸಮಗ್ರ ಯೋಗ'ದ ವೈಶಿಷ್ಟ್ಯವನ್ನು ಕುರಿತು ಶ್ರೀ ಅರವಿಂದರೇ ಹೀಗೆ ಹೇಳಿದ್ದಾರೆ. "ಇತರ ಯೋಗಗಳಲ್ಲಿ ಅವರೋಹಣ ಕ್ರಿಯೆ ಸಾಧನೆಯಲ್ಲಿ ಗೌಣವಾದುದು, ಇಲ್ಲವೆ ಆರೋಹಣ ಕ್ರಿಯೆಯ ಒಂದು ಪರಿಣಾಮವಾಗಿ ಘಟಿಸುವಂಥದು. ಅಲ್ಲಿ ಆರೋಹಣವೇ ನಿಜದ ಸಂಗತಿ. ಆದರೆ ನಮ್ಮ 'ಸಮಗ್ರ ಯೋಗ'ದಲ್ಲಿ ಆರೋಹಣ ಕ್ರಿಯೆ ಮೊದಲ ಹೆಜ್ಜೆ ಮಾತ್ರ. ಇದು ಅವರೋಹಣ ಕ್ರಿಯೆಗೆ ಒಂದು ಸಾಧನ. ಆರೋಹಣ ಕ್ರಿಯೆಯಿಂದ ಪ್ರಾಪ್ತವಾದ ಹೊಸ ಚೇತನದ ಅವರೋಹಣವೇ ನನ್ನ 'ಸಮಗ್ರ ಯೋಗ'ದ ಪ್ರಮುಖ ವೈಶಿಷ್ಟ್ಯ. ತಂತ್ರಯೋಗ ಮತ್ತು ವೈಷ್ಣವ ಭಕ್ತಿ ಪಂಥಗಳೂ ಜೀವನದಿಂದ ಬಿಡುಗಡೆ ಹೊಂದುವುದನ್ನೇ ಗುರಿಯಾಗಿರಿಸಿಕೊಂಡಿವೆ. ಆದರೆ 'ಸಮಗ್ರ ಯೋಗ'ದಲ್ಲಿ ಜೀವನದ ದಿವ್ಯ ಸಾರ್ಥಕತೆಯೆ ಮುಖ್ಯೋದ್ದೇಶ.

ಈ ಉದ್ದೇಶ ಸಾಧನೆಗಾಗಿ 'ಸಮಗ್ರ ಯೋಗ' ವಿಧಾನವನ್ನು ಇಲ್ಲಿ ಬಹಿರಂಗವಾಗಿ ಸಾರಲಾಗಿದೆ. ಈ ವಿಧಾನವು ಅದರ ಗುರಿಯ ಹಾಗೆ ಸಮಗ್ರವೂ ಅಖಂಡವೂ ಆಗಿದೆ. ಅಂದರೆ ಚೇತನದ ಹಾಗೂ ಪ್ರಕೃತಿಯ ಸಮಗ್ರ ಹಾಗೂ ಅಖಂಡ ಪರಿವರ್ತನೆಯಾಗಬೇಕಾಗಿದೆ. ಈ ಯೋಗದ ವಿಶಿಷ್ಟ ವಿಧಾನದ ಪ್ರಕ್ರಿಯೆಗಳಿಗೆ ಸಹಾಯಕವಾಗುವಂತೆ ಹಳೆಯ ಯೋಗ ವಿಧಾನಗಳ ಪ್ರಕ್ರಿಯೆಗಳನ್ನು ಕೆಲಮಟ್ಟಿಗೆ ಮಾತ್ರ ಬಳಸಿಕೊಳ್ಳಲಾಗಿದೆ. ಹಳೆಯ ಯೋಗಗಳಲ್ಲಿ 'ಸಮಗ್ರ ಯೋಗ'ದ ಈ ವಿಧಾನವನ್ನು ಅಥವಾ ಇದರಂಥದೊಂದನ್ನು ಇಡಿಯಾಗಿ ಕಂಠೋಕ್ತವಾಗಿ ಸಾರಿಲ್ಲ. ಇಲ್ಲವೆ ಈ ವಿಧಾನದ ಸಿದ್ಧಿಯನ್ನು ಯಾರೂ ಸಾಧಿಸಿಕೊಂಡಂತೆಯೂ ನನಗೆ ಕಂಡುಬಂದಿಲ್ಲ. ಹಾಗೆ ನನಗೆ ಕಂಡು ಬಂದಿದ್ದರೆ ಈ ಹೊಸ ಯೋಗ ಮಾರ್ಗವೊಂದನ್ನು ರಚಿಸಲು ನನ್ನ ಸಮಯವನ್ನು ಹಾಳು ಮಾಡಿಕೊಳ್ಳುತ್ತಿರಲಿಲ್ಲ. ಮೂವತ್ತು ವರ್ಷಗಳ ಸುದೀರ್ಘ ಅನ್ವೇಷಣೆ ಮತ್ತು ಅಂತಃ ಸೃಷ್ಟಿಗಳಲ್ಲಿ ತೊಡಗದೆ, ಆಗಲೆ ಸರ್ವರಿಗಾಗಿ, ಅಚ್ಚುಕಟ್ಟಾಗಿ ಸಿದ್ಧಪಡಿಸಿದ ಯೋಗಪಥಗಳಲ್ಲಿ ಅನಾಯಾಸವಾಗಿ ನಾಗಾಲೋಟದಿಂದ ನನ್ನ ಗುರಿ ಮುಟ್ಟಲು ಧಾವಿಸುತ್ತಿದ್ದೆ. ನಮ್ಮ ಈ 'ಸಮಗ್ರ ಯೋಗ'ವು ಹಳೆಯ ಯೋಗಪಥಗಳನ್ನೆ ಪುನಃ ಅನುಸರಿಸುವುದಿಲ್ಲ, ಇದೊಂದು ನೂತನ ಆಧ್ಯಾತ್ಮಿಕ ಸಾಹಸವಾಗಿದೆ !'' ಎಂದಿದ್ದಾರೆ ಶ್ರೀ ಅರವಿಂದರು. ವರಕವಿ ಬೇಂದ್ರೆಯವರು ಶ್ರೀ ಅರವಿಂದರ 'ಮಹಾ ಪ್ರಸ್ಥಾನ'ವನ್ನು ಕುರಿತು ಬರೆದ ಕರ್ಮದ ಎರಡು ಪದ್ಯಗಳನ್ನೋದಿ ಈ ಪ್ರಬಂಧದ ಓದನ್ನು ಮುಗಿಸುವೆ :-

ತಾಪಾರ್ತಜನಕೆ ನೆರಳಾಗಿ ನೀಡಿ ವಟವೃಕ್ಷವಾದ ಜೀವ ; ।
ತತ್ ಬ್ರಹ್ಮದಲ್ಲಿ ಬೇರ್ಬಿಟ್ಟು ಇಳಿದ ಅಶ್ವತ್ಥದಂಥ ಭಾವ.।
ಧೀ ಪ್ರಳಯ ಜಲದಿ ತೇಲಾಡುತಿಹುದು ಅರಳೆಲೆಯಲೇನೊ ಒಂದು ।
ತಾನಾಗಿ ನಾಳೆ ನವಜೀವಕೋಟಿಯನೆ ಮೆರೆಯಲಿಹುದು ಬಂದು.।

.......................................................................................

ಅರವಿಂದವೆಂಬ ಬರಿ ಹೆಸರಿನಲ್ಲೆ ಸೌಗಂಧ ತುಂಬಿಬಹುದು।
ಚಾರಿತ್ರ್ಯವನ್ನು ನೆನಸಿದರೆ ಸಾಕು ಬ್ರಹ್ಮಾಂಡ ಬಿಂಬಿಸುವುದು.।
ಆ ಒಂದೆ ರಾತ್ರಿಯಲಿ ಬಯಲು ತುಂಬಿತೋ ಪಾರಿಜಾತ ಕೀರ್ತಿ।
ಈ ವಿಶ್ವದೊಡನೆ ಒಂದಾಗಿ ನಿಂತಿತೋ ಆ ವಿರಾಟ ಮೂರ್ತಿ.॥

# ರಾಮಾಯಣದಲ್ಲಿಯ ಒಂದು ಪಕ್ಷಾಂತರ ಪ್ರಸಂಗ

**ಎಸ್.ಆರ್. ಮಳಗಿ**

ವಾಲ್ಮೀಕಿ ರಾಮಾಯಣದಲ್ಲಿ ನಡೆದ ಒಂದು ಪಕ್ಷಾಂತರ ಪ್ರಸಂಗವಿದು. ರಾಮ-ರಾವಣರ ಯುದ್ಧ ಸನ್ನಿಹಿತವಾದ ಕಾಲ. ಮಹಾ ಪ್ರಾಜ್ಞನಾದ ವಿಭೀಷಣನು ಅಣ್ಣ ರಾವಣನ ಬಳಿಗೆ ಬಂದು ನಮಸ್ಕರಿಸಿ, ತನಗೆ ಯುಕ್ತವೆಂದು ಕಂಡಿದ್ದ ಹಿತವಚನ ನುಡಿಯುತ್ತಾನೆ. 'ಅಣ್ಣ, ನೀನು ಸೀತಾದೇವಿಯನ್ನು ಅಡವಿಯಿಂದ ಲಂಕಾಪುರಿಗೆ ತಂದಾಗಿನಿಂದ ನಮಗೆ ಅಶುಭ ನಿಮಿತ್ತಗಳು ಕಾಣುತ್ತ ಬಂದಿವೆ. ನಾನು ತಪ್ಪು ತಿಳಿವಳಿಕೆಯಿಂದಲೋ ಇಲ್ಲವೆ ಸ್ವಾರ್ಥದ ಯಾವುದೋ ಮಹಾತ್ವಾಕಾಂಕ್ಷೆಯಿಂದಲೋ ಈ ಮಾತನ್ನು ಹೇಳುತ್ತಿದ್ದೇನೆಂದು ತೋರಬಹುದು. ಆದರೆ ಪ್ರಭು, ಹಾಗೆ ನನ್ನಲ್ಲಿ ತಪ್ಪೆಣಿಸಬೇಡ. ನನ್ನ ಮಾತು ನಿನಗೆ ರುಚಿಸಿದರೆ ಸೀತಾದೇವಿಯನ್ನು ಶ್ರೀರಾಮನಿಗೆ ಒಪ್ಪಿಸಿಬಿಡು' ಎಂದ. ವಿನಯದಿಂದ ಯೋಗ್ಯಮಾತನ್ನೇ ವಿಭೀಷಣ ವಿಜ್ಞಾಪಿಸಿದ. ಆದರೆ ರಾವಣನಿಗೆ ವಿನಾಶಕಾಲ ಒದಗಿ ಬಂದಿತ್ತು. ಧೀಮಂತ ತಮ್ಮನ ಹಿತವಚನ ಆತನಿಗೆ ರುಚಿಸಲಿಲ್ಲ. ಪ್ರತಿಯಾಗಿ ರಾವಣನು ವಿಪರೀತವಾಗಿ ಸಿಟ್ಟಿಗೆದ್ದ. ವಿಭೀಷಣನ ಮನಸ್ಸಿಗೆ ಚುಚ್ಚುವಂತೆ ಕೆಟ್ಟ ಮಾತನ್ನಾಡಿದ: 'ವಿಭೀಷಣ, ನೀನು ಹೊಟ್ಟೆಯುರಿಯಿಂದ ತುಂಬಿದ ಸರ್ಪ. ನಿನಗೆ ಇಷ್ಟವಿದ್ದರೆ, ನಮ್ಮ ಶತ್ರುವಿನೊಡನೆ ಕೂಡಿಕೊಂಡು ಬಾಳು. ನೀನು ವೈರಿಯ ಪಕ್ಷ ಸೇರಿಕೊಂಡಿದ್ದೀಯೆಂಬುದು ನಿಜವಾಯ್ತು. ಹೆಸರಿಗೆ ಮಾತ್ರ ಹಿತವಂತನಂತೆ ನಟಿಸುತ್ತೀ. ನಿನ್ನೊಂದಿಗೆ ಬಾಳುವುದು ನನಗೆ ಬೇಡ. ಎಲ ರಾಕ್ಷಸ, ಬೇರೆ ಯಾವನಾದರೂ ಇಂಥ ಮಾತನ್ನಾಡಿದ್ದರೆ ಇದೇ ಕ್ಷಣ ಆತ ಬದುಕಿ ಉಳಿಯುತ್ತಿದ್ದಿಲ್ಲ. ನೀನು ಕುಲಗೇಡಿ, ನಿನಗೆ ಧಿಕ್ಕಾರ ! ಹೋಗು' ಎಂದ. ನ್ಯಾಯವಾದಿಯಾದ ವಿಭೀಷಣನು ತನ್ನ ಹಿತ ವಚನಕ್ಕೆ ಪ್ರತಿಯಾಗಿ ಇಂಥ ಕಠೋರ ಮಾತನ್ನಾಡಿಸಿಕೊಂಡ. ಆಗ ಆತ ಗದೆಯನ್ನು ಹಿಡಿದಿದ್ದಂತೆಯೆ ಎದ್ದು ನಿಂತು ರಾವಣನಿಗೆ - 'ಪ್ರಭು, ನೀನು ನನ್ನ ಅಣ್ಣ ನಿನಗೆ ತೋರಿದ್ದನ್ನು ಹೇಳು ; ಬೇಡ ಎನ್ನಲಾರೆ. ಮಹಾರಾಜ, ರಾಜನಾದವನಿಗೆ ಸದಾ ಪ್ರಿಯವಾದ ಮಾತನ್ನು ಹೇಳುವವರು ಬೇಕಾದಷ್ಟು ಜನರಿರುತ್ತಾರೆ. ಆದರೆ ಪ್ರಿಯವಲ್ಲದ ಹಿತವಾದ ಮಾತನ್ನು ಹೇಳುವವರು ಕಡಮೆ ; ಅಂಥ ಮಾತನ್ನು ಕೇಳುವವರೂ ಕಡಮೆಯೆ. ಇನ್ನು ಮಾತು ಸಾಕು. ನೀನು ನಿನ್ನನ್ನು ಎಲ್ಲ ವಿಧದಿಂದಲೂ ರಕ್ಷಿಸಿಕೋ. ರಾಕ್ಷಸರಿಂದ ತುಂಬಿದ ಈ ನಿನ್ನ ಲಂಕಾ ನಗರವನ್ನೂ ರಕ್ಷಿಸಿಕೋ. ನಿನಗೆ ಶುಭವಾಗಲಿ ; ನನ್ನನ್ನು ಬಿಟ್ಟು ಕೊಟ್ಟು ನೀನು ಸುಖಿಯಾಗಿರು'. - ಹೀಗೆಂದು ಗಡುಸಾಗಿಯೇ ಹೇಳಿ, ವಿಭೀಷಣನು ನಾಲ್ವರು ರಾಕ್ಷಸರೊಂದಿಗೆ ಶ್ರೀರಾಮನ ಪಕ್ಷಕ್ಕೆ ಸೇರಿಕೊಂಡ.

ಕೆಲವು ತಿಂಡಿ-ತಿನಸುಗಳು ಪಾನೀಯಗಳು ನಾಲಗೆಗೆ ಬಲು ರುಚಿ, ಆದರೆ ಹೊಟ್ಟೆಗೆ ಹಿತಕಾರಿಯಲ್ಲ, ಕೆಲವಂತೂ ಆರೋಗ್ಯಕ್ಕೆ ತುಂಬಾ ಅಪಾಯಕಾರಿ. ಹಾಗೆಯೆ, ನಾಲಗೆಗೆ ಅಷ್ಟೊಂದು ರುಚಿಯೆನಿಸದ ಆಹಾರ-ಪಾನೀಯಗಳು ದೇಹಕ್ಕೆ ಆರೋಗ್ಯಕರ ಇರಬಹುದಷ್ಟೆ ? ಪ್ರಿಯವಾದ ಮತ್ತು ಅಪ್ರಿಯವಾದ ಮಾತುಗಳ ವಿಚಾರವೂ ಹೀಗೆಯೆ. ಮುಖಸ್ತುತಿ ಕೇಳಲು ಬಲು ಇಂಪು, ಸೊಗಸು. ಹೊಗಳಿಕೆಗೆ ಕಿವಿಗೊಡದವರು ಯಾರು? ಆದರೆ, ವ್ಯಕ್ತಿಯ ಬಡಾಯಿತನಕ್ಕೆ ಪ್ರೋತ್ಸಾಹ ನೀಡುವ, ಅಡ್ಡ ದಾರಿ ಹಿಡಿಸುವ ಸ್ವಾರ್ಥಿಗಳಾದ ಹಿತಶತ್ರುಗಳ

ಹೊಗಳಿಕೆಗೆ ಕಿವಿಗೊಟ್ಟರೆ ಹಾನಿ ತಪ್ಪದು. ಇನ್ನು ನಿಜವಾದ ಆಪ್ತ ಬಂಧುವೋ ಅಪ್ರಿಯವಾಗಿದ್ದರೂ ಸತ್ಯವನ್ನೇ ನುಡಿಯುತ್ತಾನೆ. ಅದರಿಂದ ಉಂಟಾಗುವ ಯಾವ ಪರಿಣಾಮವನ್ನೂ ಆತ ಲೆಕ್ಕಿಸುವುದಿಲ್ಲ. ತನಗೆ ಬೇಕಾದವನು ಕೆಟ್ಟ ದಾರಿ ಹಿಡಿದು ಹಾಳಾಗಬಾರದೆಂಬುದೇ ಆತನ ಕಳಕಳಿ. ಆಗ ದೋಷಗಳನ್ನು ಯುಕ್ತ ರೀತಿಯಲ್ಲಿ ಎತ್ತಿ ತೋರಿಸುತ್ತಾನೆ.

ವಿಭೀಷಣನು ರಾವಣನಿಗೆ ನಿಜವಾದ ಹಿತೈಷಿಯಾಗಿದ್ದ, ನಿಷ್ಠಾವಂತ ತಮ್ಮನಾಗಿದ್ದ. ರಾಜನಾಗಿದ್ದ ಅಣ್ಣ ಶುಚಿಯಾಗಿ ಬಾಳಬೇಕು, ಎಲ್ಲರಿಗೂ ಒಂದು ಮಾದರಿಯಾಗಬೇಕು ಎಂದು ಆತನೊಂದಿಗೆ ವಾದಿಸಿದ. ಆದರೆ ರಾವಣ ಕಾಮಾಂಧ, ಮದಾಂಧ. ಪ್ರಾಜ್ಞನಾದ ತಮ್ಮನನ್ನೇ ಧಿಕ್ಕರಿಸಿದ ; ತನ್ನ ವಿನಾಶವನ್ನು ತಾನೇ ತಂದುಕೊಂಡ.

ಪ್ರಾಜ್ಞರೂ, ವಿವೇಕಿಗಳೂ ಸತ್ಯ, ಧರ್ಮ, ನ್ಯಾಯ ಮುಂತಾದ ಜೀವನ ಮೌಲ್ಯಗಳನ್ನು ಕಾಪಾಡಿಕೊಂಡು ಬಾಳುತ್ತಾರೆ. ಪ್ರಸಂಗ ಬಂದರೆ ಪ್ರಾಣಾಪಾಯಕ್ಕೂ ಎದೆಯೊಡ್ಡಿ ನಿಲ್ಲುತ್ತಾರೆ ; ಅವರು ಬಂಧು-ಬಳಗವೆಂಬ ಸಂಬಂಧವನ್ನೂ ಲೆಕ್ಕಿಸರು. ವಿಭೀಷಣನು ರಾವಣನಲ್ಲಿ ವಿವೇಕವನ್ನು ಎಚ್ಚರಿಸಲು ಯತ್ನಿಸಿದ. ಎಲ್ಲ ವ್ಯರ್ಥವಾಯ್ತು. ರಾವಣನು ತನ್ನ ದುಷ್ಟತನಕ್ಕೇ ಅಂಟಿಕೊಂಡಾಗ ವಿಭೀಷಣನು ಆತನನ್ನು ತ್ಯಜಿಸಿ ಧರ್ಮಾತ್ಮನಾದ ಶ್ರೀರಾಮನನ್ನು ಕೂಡಿಕೊಂಡ. ದುರ್ಜನ ಸಂಗವನ್ನು ತೊರೆದು ಸತ್ಯದ ಪಕ್ಷಕ್ಕೆ ಸೇರಿಕೊಂಡ.

# ವಚನ ಭಾರತ

## (ಒಂದು ಅವಲೋಕನ)

### ಎಸ್.ಆರ್.ಮಳಗಿ

ದಿ. ಡಾ. ಎ.ಆರ್.ಕೃಷ್ಣಶಾಸ್ತ್ರಿಗಳು ಇಂದಿನ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ದೊಡ್ಡ ಹೆಸರು. ಆವರು ಆಧುನಿಕ ಕನ್ನಡ ಸಾಹಿತ್ಯವಾಹಿನಿಗೆ, -ಅದರಲ್ಲೂ ವಿಶೇಷವಾಗಿ-ಗದ್ಯಸಾಹಿತ್ಯಕ್ಕೆ, ಕ್ರಿಯಾತ್ಮಕವಾಗಿ, ಫಲಪ್ರದ ತಿರುವುಗಳನ್ನು ಕೊಟ್ಟ ಅಗ್ರಮಾನ್ಯರಲ್ಲಿ ಒಬ್ಬರು. ಕನ್ನಡದ ಕಟ್ಟಾಳುಗಳಾಗಿದ್ದ ಅವರು, ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘವನ್ನು 1918ರಲ್ಲೇ ಕಟ್ಟಿ, ಉನ್ನತ ಶ್ರೇಣಿಯ 'ಪ್ರಬುದ್ಧ ಕರ್ನಾಟಕ' ದಂಥ ಸಾಹಿತ್ಯಕ ತ್ರೈಮಾಸಿಕ ಪತ್ರಿಕೆಯೊಂದನ್ನು ಆರಂಭಿಸಿದರು. ಹದಿಮೂರು ವರ್ಷಗಳ ಕಾಲ, ಅದರ ಸಂಪಾದಕತ್ವದ ಹೊಣೆಹೊತ್ತು, ಅಂದಿನ ಅದೆಷ್ಟೋ ಉದಿತ ಹಾಗೂ ಉದಯೋನ್ಮುಖ ಸಾಹಿತಿಗಳ ಸೃಜನಾತ್ಮಕ, ಸಂಶೋಧನಾತ್ಮಕ, ವಿಮರ್ಶಾತ್ಮಕ ರಚನೆಗಳ ಮೌಲಿಕ ಸಾಹಿತ್ಯ ಸೃಷ್ಟಿಗೆ ಕಾರಣಕರ್ತರಾದರು. ಕೃಷ್ಣಶಾಸ್ತ್ರಿಗಳ ಸಂಪಾದಕೀಯಗಳೂ ಅವರ ಸಂಪಾದಕೀಯ ಕತ್ತರಿಗೆ ಒಳಪಟ್ಟ ಲೇಖನಗಳ ಆಯ್ಕೆಗಳೂ ಅಂದಂದಿನ ಕನ್ನಡ ವಾಙ್ಮಯದ ಒಲವು-ನಿಲುವುಗಳ ಖಚಿತ ನೆಲೆಬೆಲೆಗಳನ್ನು ಎತ್ತಿ ತೋರಿಸುವ, ಒರೆಹಚ್ಚಿ ನೋಡುವ ಮೌಲ್ಯ ಮಾಪಕಗಳೇ ಆಗಿದ್ದವು. ಅವರ ಸಂಪಾದಕೀಯಗಳು ಮತ್ತು ಅವರ 'ಲೇಖನಗಳು - ಭಾಷಣಗಳು' ಮುಂತಾದವು ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯ ಅಭ್ಯಾಸಿಗೆ ಆವಶ್ಯಕ ದೃಷ್ಟಿಕೋನಗಳ ದಿಕ್‌ಸೂಚಿಗಳಾಗಿವೆ.

ಶ್ರೀಪತಿಯ ಕತೆಗಳು, ಕನ್ನಡ ಕೈಪಿಡಿಯ ಅಲಂಕಾರ ಶಾಸ್ತ್ರ ವಿಭಾಗ, ಭಾಸಕವಿ, ಸಂಸ್ಕೃತ ನಾಟಕ, ವಚನ ಭಾರತ, ಕಥಾಮೃತ, ನಾಗಮಹಾಶಯ, ಬಂಕಿಂಚಂದ್ರ, ನಿಬಂಧಮಾಲಾ-ಮುಂತಾದ ಸೃಜನಾತ್ಮಕ ಮತ್ತು ಸಾಹಿತ್ಯ ವಿಮರ್ಶನಾತ್ಮಕ ಗದ್ಯಕೃತಿಗಳು ಅವರ ಕೈಯಿಂದ ರಚಿತವಾಗಿ ಹೊರಬರುತ್ತಲೆ, ಅವರು ಆಧುನಿಕ ಕನ್ನಡದ ಗದ್ಯಶಿಲ್ಪಿಗಳಲ್ಲಿ ಸುವಿಖ್ಯಾತರೆನಿಸಿದರು.

ಕನ್ನಡ ಪ್ರಾಧ್ಯಾಪಕ ಪದದಿಂದ ನಿವೃತ್ತರಾದ ಮೇಲೆಯೂ ಮೇಲ್ಕಾಣಿಸಿದ ಬಹುಮಟ್ಟಿನ ಅವರ ಗ್ರಂಥ ರಚನಾಕಾರ್ಯ ಮುಂದುವರಿದುದು. ಪರಿಪಕ್ವ ಮನಸ್ಸಿನ, ಸುದೀರ್ಘ ಅನುಭವದ, ಮಾಗಿದ ಬುದ್ಧಿ-ಹೃದಯಗಳ, ಪಳಗಿದ ಕೈಯ ಕುಶಲಕಲೆ ಅವರ ಈ ಕೃತಿಗಳಲ್ಲಿ ಒಡಮೂಡಿದೆ. ಇವುಗಳಲ್ಲಿ 1950ರಲ್ಲಿ ಪ್ರಕಟವಾದ 'ವಚನಭಾರತ'ವು ಒಂದು ಅನರ್ಘ್ಯ ಕೃತಿರತ್ನ. 'ಬಂಡೆಯೊಡೆದು ಉಕ್ಕಿಬರುವ ತಿಳಿಜಲದ ಊಟೆ, 'ಕನ್ನಡದ ವ್ಯಾಸ ಭಾರತ' ಎಂದು ಹೊಗಳಿದವರುಂಟು ಇದನ್ನು !

'ವಚನಭಾರತವು' ಸಂಸ್ಕೃತ ಮಹಾಭಾರತದ ಒಂದು ಪುನಸ್ಸೃಷ್ಟಿ, ಒಂದು ಹೊಸ ರಸಪಾಕ. ವ್ಯಾಸಭಾರತವನ್ನು ಅನುಸರಿಸಿ ಸುಲಭವಾದ ಕನ್ನಡದಲ್ಲಿ, ಅಡಕವಾಗಿರುವಂತೆ ಮಹಾಭಾರತ ಕಥೆಯನ್ನು ಬರೆಯುವುದೇ ಕೃಷ್ಣಶಾಸ್ತ್ರಿಗಳ ಗುರಿಯಾಗಿತ್ತು. 'ಹೂವಿನ ಸರವೆತ್ತಿದಹಾಗೆ' ಈ ಕೃತಿ ರಚನಾಕಾರ್ಯ ನಿರೀಕ್ಷಿಸಿದ್ದ ಕಾಲಾವಧಿಗಿಂತ ಮುಂಚೆಯೇ ಮುಗಿದುದಾಗಿ ಅವರು ಹೇಳಿದ್ದಾರೆ. 'ಹೂವಿನ ಸರವೆತ್ತಿದ ಹಾಗೆ' ಬರೆವಣಿಗೆ ನಡೆಯಬೇಕಾದರೆ ಮಹಾಭಾರತದಂಥ ಬೃಹದ್ಗ್ರಂಥವು ಕೃಷ್ಣಶಾಸ್ತ್ರಿಗಳಿಗೆ ಅಂಗೈಯ್ಯ ನೆಲ್ಲಿಯಾಗಿತ್ತೆಂದೇ ಹೇಳಬಹುದು.

'ವಚನಭಾರತ'ದಲ್ಲಿ ಮುಖ್ಯವಾಗಿ ಮೂರು ವಿಭಾಗಗಳಿವೆ : ಮೊದಲನೆಯದು - ಪೀಠಿಕೆ ; ಎರಡನೆಯದು - ಹದಿನೆಂಟು ಪರ್ವಗಳಲ್ಲಿ ಕ್ರಮವಾಗಿ ನಿರೂಪಿಸಿದ ಕಥಾಭಾಗ ; ಮತ್ತು ಮೂರನೆಯದು - ಮಹಾಭಾರತದ ಮೂರು ದೊಡ್ಡ ಉಪಾಖ್ಯಾನಗಳನ್ನು ಒಳಗೊಂಡ ಅನುಬಂಧ. ಒಟ್ಟು ಗ್ರಂಥದ ಗಾತ್ರ ಡೆಮಿ ಅಷ್ಟಪತ್ರಾಕಾರದ ಸುಮಾರು ಐನೂರು ಪುಟಗಳದ್ದು.

ಇದರಲ್ಲಿ ಪೀಠಿಕಾಭಾಗವು 'ವಚನಭಾರತ' ಕಥಾಭಾಗದ ಮಹಾಸೌಧಕ್ಕೆ ಸುವರ್ಣದ ಮಹಾದ್ವಾರವಾಗಿದೆ. ಇದು ಅಮೂಲ್ಯ ಟಿಪ್ಪಣಿಗಳಿಂದ ಕೂಡಿದ್ದು, ಎಪ್ಪತ್ತು ನಾಲ್ಕು ಪುಟಗಳನ್ನು ಆವರಿಸಿದೆ. ಇಲ್ಲಿ ಮಹಾಭಾರತಕ್ಕೆ ಸಂಬಂಧಿಸಿದ ಹಲವಾರು ಸಮಸ್ಯೆಗಳ ಹಾಗೂ ವಿಷಯಾಂಶಗಳ ಚರ್ಚೆ ವಿವೇಚನೆಗಳು ಕೃಷ್ಣಶಾಸ್ತ್ರಿಗಳ ಆಳವಾದ ಸಂಶೋಧನೆ, ಹರಿತವಾದ ತರ್ಕಕೌಶಲ, ಮತ್ತು ಸ್ವತಂತ್ರದೃಷ್ಟಿ ಇವುಗಳ ಪರಿಚಯ ಮಾಡಿಕೊಡುತ್ತವೆ.

ಭಾರತೀಯ ಹಾಗೂ ಪಾಶ್ಚಾತ್ಯ ವಿದ್ವಾಂಸರು ವ್ಯಾಸಭಾರತ ಮತ್ತು ವಾಲ್ಮೀಕಿ ರಾಮಾಯಣಗಳು ಭಾರತದೇಶದ 'ಪೂರ್ವಾರ್ಜಿತ ಸಂಪತ್ತು, ದೊಡ್ಡ ಆಸ್ತಿ' ಎಂದು ಬಣ್ಣಿಸಿದ್ದಾರೆ. ನಮ್ಮ ಪ್ರಾಚೀನ ಸಂಸ್ಕೃತಿ ಸ್ವರೂಪದ ಭವ್ಯ ದರ್ಶನವನ್ನು ಈ ಮಹಾಗ್ರಂಥಗಳಿಂದ ನಾವು ಪಡೆಯುತ್ತೇವೆ. ಇಷ್ಟೇ ಅಲ್ಲ, ಭಾರತೀಯ ಸಂಸ್ಕೃತಿಯನ್ನೆ ರೂಪಿಸಿದ ಗ್ರಂಥಗಳಿವು. ಇವೆರಡರಲ್ಲಿ ಮಹಾಭಾರತವು ಪ್ರಪಂಚದಲ್ಲಿಯೇ ಅತ್ಯುನ್ನತ ಕೃತಿ - ಹಿಮಾಲಯದಂತೆ. ಆಳದಲ್ಲಿ, ವಿಸ್ತಾರದಲ್ಲಿ, ಇದೊಂದು ಮಹಾಸಾಗರ. ಒಂದು ಮಹಾಕಾವ್ಯವೆಂದು ಇದನ್ನು ಕರೆಯುವುದು ಅಲ್ಪವೆನಿಸೀತು. ಇದೊಂದು 'ಸಮಗ್ರವಾಙ್ಮಯ ಸೌಧ'. ಜಗತ್ತಿನ ಎಲ್ಲ ಸಾಹಿತ್ಯ ಪ್ರಪಂಚದಲ್ಲೆ ಇದೊಂದು ಪವಾಡ. ಈ ದೈತ್ಯ ಕೃತಿಯನ್ನು ಓದಲು ಒಂದು ಆಯುಷ್ಯ ಸಾಲದು - ಈ ಮುಂತಾದ ಅಭಿಪ್ರಾಯಗಳು ಮಹಾಭಾರತದ ಬಗ್ಗೆ ವ್ಯಕ್ತವಾಗಿವೆ . ಮಹಾಭಾರತದ ಹುಟ್ಟು- ಬೆಳವಣಿಗೆ, ಅದರ ಕಾಲ ಮತ್ತು ಕರ್ತೃತ್ವ ಮುಂತಾದವುಗಳನ್ನು ಕುರಿತು, ಕೃಷ್ಣಶಾಸ್ತ್ರಿಗಳು ಪೀಠಿಕೆಯಲ್ಲಿ ಕೆಲವು ವಿಚಾರಗಳನ್ನು ಮಂಡಿಸಿದ್ದಾರೆ. ಅವುಗಳನ್ನು ಸ್ವಲ್ಪದರಲ್ಲಿ ಹೀಗೆ ಸಂಗ್ರಹಿಸಬಹುದಾಗಿದೆ : ಮಹಾಭಾರತದ ಗಾತ್ರದ ಬಗ್ಗೆ ಹೇಳಬೇಕೆಂದರೆ, ಗ್ರೀಕ್ ಜನರಿಗೆ ಭಾರತ-ರಾಮಾಯಣಗಳಂತಿರುವ 'ಇಲಿಯಡ್' ಮತ್ತು 'ಒಡೆಸ್ಸಿ' ಗ್ರಂಥಗಳೆರಡನ್ನೂ ಒಟ್ಟು ಕೂಡಿಸಿದರೂ ಅದು ಮಹಾಭಾರತದ ಎಂಟರಲ್ಲಿ ಒಂದು ಭಾಗ ಮಾತ್ರ. ಇದು ಮಹತ್ವದಿಂದ ಮತ್ತು ಭಾರವತ್ವದಿಂದ ಮಹಾಭಾರತವೆನಿಸಿದೆ ಗುಣ ಹಾಗೂ ಗಾತ್ರ ಎರಡರಲ್ಲೂ. ಶ್ರೀಕೃಷ್ಣದ್ವೈಪಾಯನ ವ್ಯಾಸ ಮಹರ್ಷಿಗಳು ತಮ್ಮ ಶಿಷ್ಯನಾದ ವೈಶಂಪಾಯನ ಮುನಿಗೆ ಹೇಳಿದ ಮೂಲ ಕಥೆಗೆ 'ಜಯ' ಎಂಬ ಹೆಸರಿತ್ತು. ಇದು ಕೇವಲ 8800 ಗ್ರಂಥ ಪ್ರಮಾಣದ್ದು. 'ಗ್ರಂಥ'ಎಂದರೆ 32 ಅಕ್ಷರಗಳ ಶ್ಲೋಕ. ಮೂಲವಾದ ಈ ವ್ಯಾಸಕೃತಿಯನ್ನು ವೈಶಂಪಾಯನ ಮುನಿ, ಜನಮೇಜನರಾಯನಿಗೆ, ಅವನು ಮಾಡಿದ ಸರ್ಪಯಾಗಕಾಲದಲ್ಲಿ ಹೇಳಿದ. ಆಗ ಇದು 'ಭಾರತ' ಎನಿಸಿತು. ಇದು ಸುಮಾರು 24000 ಗ್ರಂಥ ಪ್ರಮಾಣದ್ದಾಯ್ತು. ಈ 'ಭಾರತ'ವನ್ನು ಕೇಳಿದ್ದ ಉಗ್ರಶ್ರವನೆಂಬ ಸೂತ ಪುರಾಣಿಕನು, ನೈಮಿಷಾರಣ್ಯದಲ್ಲಿ ಶೌನಕನೆಂಬ ಕುಲಪತಿಯ ಯಜ್ಞಕ್ಕೆ ಹೋಗಿದ್ದಾಗ, ಅಲ್ಲಿಯ ಋಷಿಗಳಿಗೆ ಇದನ್ನು ಹೇಳಿದ. ಆಗ ಇದು ಒಂದು

ಲಕ್ಷ ಗ್ರಂಥ ಪ್ರಮಾಣದ್ದಾಗಿ 'ಮಹಾಭಾರತ' ಎನಿಸಿತು. ಈಗಿರುವ ಮಹಾಭಾರತವು ಒಂದು ಲಕ್ಷಕ್ಕೂ ಮಿಕ್ಕಿರುವ ಗ್ರಂಥ ಪ್ರಮಾಣದ್ದು. ಹೀಗೆ ಕಾಲಕಾಲಕ್ಕೆ ಬೆಳೆಯುತ್ತ, ಈ ಗಾತ್ರವುಂಟಾದುದು ಈಗ್ಗೆ 1500 ವರ್ಷಗಳ ಹಿಂದೆಯೇ. ಕ್ರಿ.ಪೂ.400ರಿಂದ ಕ್ರಿ.ಶ.400ರ ವರೆಗೆ, ಎಂಟು ಶತಮಾನಗಳ ಕಾಲ, ಬೆಳೆದು ನಿಂತ ಮಹಾವೃಕ್ಷವಿದು. ಇದಕ್ಕೆ ಬೀಜ ರೂಪ ವೃತ್ತಾಂತವೂ ಕೌರವ-ಪಾಂಡವರ ಯುದ್ಧ, ಈ ಯುದ್ಧವು ಕ್ರಿ.ಪೂ.10ನೆಯ ಶತಮಾನಕ್ಕಿಂತ ಈಚೆ ಇರಲಾರದು. ಎಂದು ಮೆಗ್ಡೋನಾಲ್ ಅವರ ಅಭಿಪ್ರಾಯ. ಇದನ್ನು ಕೃಷ್ಣಶಾಸ್ತ್ರಿಗಳು ತಾತ್ಪೂರ್ತಿಕವಾಗಿ ಒಪ್ಪಿರುವಂತೆ ಕಾಣುತ್ತದೆ. ಆದರೆ ಎ.ಡಿ.ಪುಸಾಳ್ಕರ್ ಎಂಬ ವಿದ್ವಾಂಸರು, ಭಾರತ ಯುದ್ದವು ಕ್ರಿ.ಪೂ.1400 ರಲ್ಲಿ ನಡೆಯಿತೆಂದು ತಮಗೆ ಖಚಿತವಾಗಿದೆಯೆಂದು 'Vedic Age' ಎಂಬ ಗ್ರಂಥದಲ್ಲಿ ನುಡಿದಿದ್ದಾರೆ. ನಾನಾ ಬಗೆಯ ಊಹಾಪೋಹಗಳಿಂದಲೇ ಮಹಾಭಾರತ ಕಾಲದ ಬಗ್ಗೆ ಚರ್ಚೆ ನಡೆದಿದೆ ಕೃಷ್ಣಶಾಸ್ತ್ರಿಗಳ ಅಭಿಪ್ರಾಯವು ಹೆಚ್ಚು ತೂಕದ್ದು ಎನಿಸುತ್ತದೆ. ಮಹಾಭಾರತದ ಕರ್ತೃವಿನ ಹೆಸರಿನ ಬಗ್ಗೆ ಕೃಷ್ಣಶಾಸ್ತ್ರಿಗಳು ಹೀಗೆ ಹೇಳಿದ್ದಾರೆ : 'ವೇದವನ್ನು ನಾಲ್ಕಾಗಿ ವಿಂಗಡಿಸಿದ್ದರಿಂದ 'ವ್ಯಾಸರೂ', ದ್ವೀಪದಲ್ಲಿ ತಾಯಿಯಾದ ಮತ್ಸ್ಯಗಂಧಿಯಿಂದ ಬಿಡಲ್ಪಟ್ಟಿದ್ದರಿಂದ 'ದ್ವೈಪಾಯನ'ರೂ ಇವರ ಮೈಬಣ್ಣ ಕಪ್ಪಗಿದ್ದುದರಿಂದ 'ಕೃಷ್ಣ'ರೂ ಆಗಿದ್ದ ಇವರು ಕೃಷ್ಣದ್ವೈಪಾಯನ 'ವ್ಯಾಸ'ರೆನಿಸಿದರು. ವೇದವನ್ನು ವಿಂಗಡಿಸಿದ ನಂತರ ಈ ಇತಿಹಾಸವನ್ನು ರಚಿಸಿದರು. ಧೃತರಾಷ್ಟ್ರ, ಪಾಂಡು, ವಿದುರ ಮೊದಲಾದವರು ಪರಮ ಪಥವನ್ನು ಪಡೆದ ಮೇಲೆ, 'ಜಯ' ಎಂಬ ಭಾರತ ಕಥೆಯನ್ನು ಹೇಳಿದರು. ಇದೆಲ್ಲಕ್ಕೂ ಮಹಾಭಾರತದಿಂದಲೇ ಆಧಾರಗಳನ್ನು ಕೊಟ್ಟಿದ್ದಾರೆ. ಆದರೆ, ಈ ವ್ಯಾಸರ ಹುಟ್ಟು, ಬೆಳವಣಿಗೆ, ಜ್ಞಾನಸಂಪಾದನೆ, ವೇದವಿಂಗಡಣೆ, ಭಾರತ ಮತ್ತು ಹದಿನೆಂಟು ಪುರಾಣ - ಉಪಪುರಾಣಗಳ ರಚನೆ ಮುಂತಾದ ಅಗಾಧ ಕಾರ್ಯ ಮತ್ತು ಅತಿ ದೀರ್ಘ ಆಯುಸ್ಸು ಇವುಗಳನ್ನು ನೋಡಿದಾಗ, ಇಂಥ 'ಅಮಿತ ತೇಜಸ್ಸಿ'ನಿಂದ 'ಅದ್ಭುತಕರ್ಮ'ಗಳನ್ನು ಮಾಡಬಲ್ಲ ಒಬ್ಬ ಮನುಷ್ಯ ವ್ಯಕ್ತಿ ಇರುವುದು ಅಸಂಭವ. ಆಧುನಿಕ ತಜ್ಞರ ಮತವಿದು ಕೃಷ್ಣಶಾಸ್ತ್ರಿಗಳು ಕೆಲಮಟ್ಟಿಗೆ ಇದನ್ನು ಅನುಮೋದಿಸುತ್ತಾರೆ.

ಮಹಾಭಾರತದ ಸ್ವರೂಪದ ಬಗ್ಗೆ ವಿವೇಚಿಸುತ್ತ ಕೌಟಿಲ್ಯನ ಅರ್ಥಶಾಸ್ತ್ರದ ಪ್ರಕಾರ, - ಪುರಾಣ, ಚರಿತ್ರೆ, ಕಥೆ, ಉದಾಹರಣೆ, ಧರ್ಮಶಾಸ್ತ್ರ, ಅರ್ಥಶಾಸ್ತ್ರ ಇತ್ಯಾದಿ ಎಲ್ಲ ಸೇರಿರುವ ಹಳೆಯ ಚರಿತ್ರೆಯಿದು ಎಂದು ಹೇಳಿ, ಮಹಾಭಾರತವನ್ನು 'ಇತಿಹಾಸ-ಪುರಾಣ' ಎಂದು ಪೂರ್ವಿಕರು ಕರೆಯುತ್ತಿದ್ದುದಾಗಿ ಸೂಚಿಸಲಾಗಿದೆ. ವೇದದಂತೆ ಭಾರತವೂ 'ಧರ್ಮಮೂಲ'ವಾದ್ದರಿಂದ, ಇದನ್ನು 'ಪಂಚಮವೇದ' ಎಂದು ಕರೆದರು. 'ಯತೋಧರ್ಮಸ್ತತೋಜಯಃ, ಧರ್ಮೋರಕ್ಷತಿ ರಕ್ಷಿತಃ !' ಎಂಬುದು ಮಹಾಭಾರತದ ಮೂಲಮಂತ್ರ - ಎಂದರೆ ಧರ್ಮವಿದ್ದಲ್ಲಿ ಜಯವಿದೆ, ಧರ್ಮ ರಕ್ಷಣೆ ಮಾಡುವವನನ್ನು ಧರ್ಮವು ರಕ್ಷಿಸುತ್ತದೆ.

ಇನ್ನು ಕೃಷ್ಣಶಾಸ್ತ್ರಿಗಳ 'ವಚನಭಾರತ' ದ ಕಥಾಭಾಗದ ಕಡೆಗೆ ಹೊರಳುವ : ಈ ಬಗ್ಗೆ ಅವರು ಹೇಳಿದ್ದರ ಸಾರವಿಷ್ಟು : 'ವಚನ ಭಾರತದಲ್ಲಿ ನನ್ನ ಸ್ವಂತ ಭಾವ ಒಂದೂ ಇಲ್ಲ ; ನನ್ನ ಬುದ್ಧಿಯಿಂದ ಎಲ್ಲಾದರೂ ಉತ್ತಮಗೊಳಿಸ ಹೋದರೆ, ಅದು ಕಾಮನ ಬಿಲ್ಲಿಗೆ ಬಣ್ಣ ಬಳಿದಂತೆ, ಅಥವಾ ಚಿತ್ರಪಟದ ಬೊಂಬೆಗೆ, ಬಟ್ಟೆ ಹೊಲಿಸಿದಂತೆ ಆದೀತೆಂದು ಹೆದರಿ, ಮೂಲವನ್ನೆ ಅವಲಂಬಿಸಿಕೊಂಡು ಹೋಗಿದ್ದೇನೆ. ನನ್ನ ಸಮಸ್ಯೆಯೆಲ್ಲಾ

ಮೂಲದಲ್ಲಿ ಯಾವುದನ್ನು ಬಿಡಬೇಕು ಎಂಬುದು. ಸುಮಾರು 500 ಪುಟಗಳಲ್ಲಿ ಮಹಾಭಾರತದ ಸಾರಾಂಶವೆಲ್ಲಾ ಇರಬೇಕು. ಅದು ಹರುಕು ಮುರುಕು ಜೋಡಿಸಿದಂತಾಗದೆ, ಹೊಂದಿಕೊಂಡಿರಬೇಕು; ಸಪ್ರಮಾಣವಾಗಿರಬೇಕು'. ಇದು ಕೃಷ್ಣಶಾಸ್ತ್ರಿಗಳು ಇರಿಸಿಕೊಂಡ ದೃಷ್ಟಿ. 'ವಚನಭಾರತವು ಶಬ್ದಶಃ ಭಾಷಾಂತರವಲ್ಲ. ಆದರೂ ಮೂಲದಲ್ಲಿ ಸ್ವಾರಸ್ಯವಿದ್ದಕಡೆ ಒಂದು ವಾಕ್ಯವನ್ನೂ ಬಿಟ್ಟಿಲ್ಲ, ಒಂದು ಉಪಮಾನವನ್ನೂ ಬಿಟ್ಟಿಲ್ಲ. ಕೆಲವು ಕಡೆ ಸಂಗ್ರಹಿಸಿದ್ದರೆ ಮತ್ತೆ ಕೆಲವುಕಡೆ ದೊಡ್ಡ ಪ್ರಕರಣಗಳನ್ನೆ ಬಿಟ್ಟಿದ್ದಾರೆ, ಒಂದು ಕಡೆಯೂ ಪುನರುಕ್ತಿಯಿಲ್ಲ'. ವಚನಭಾರತದ ಅನುವಾದ ವೈಖರಿಯನ್ನು ಕೃಷ್ಣಶಾಸ್ತ್ರಿಗಳ ಅಕೃತ್ರಿಮ ಆಲಂಕಾರಿಕ ಮಾತುಗಳಲ್ಲೇ ಕೇಳಬೇಕು ಅವರ ಅನುವಾದದ ರೀತಿ 'ಕಬ್ಬಿನ ಜಲ್ಲೆಯಲ್ಲಿ ಬೇರು, ಗರಿ-ಗಿಣ್ಣುಗಳನ್ನು ಕತ್ತರಿಸಿ ಹಾಕಿ, ಸಿಪ್ಪೆ ಹೆರೆದು, ಸಿಗುರು ಕಳೆದು, ಹೋಳುಮಾಡಿ, ಅದನ್ನು ಬಟ್ಟಲಲ್ಲಿ ತುಂಬಿಕೊಡುವಂಥದ್ದು; ಕಿತ್ತಲೆಯ ಹಣ್ಣಿನ ಸಿಪ್ಪೆ ಸುಲಿದು, ತೊಳೆಬಿಡಿಸಿ, ನಾರು ಬೀಜಗಳನ್ನು ತೆಗೆದುಹಾಕಿ, ಕುಸುಮವನ್ನು ಒಂದು ಅಡಕವಾದ ಬೆಳ್ಳಿಯ ತಟ್ಟೆಯಲ್ಲಿ ಜೋಡಿಸಿಡುವಂಥದ್ದು. ಅದು ಎಷ್ಟರಮಟ್ಟಿಗೆ ನೆರವೇರಿದೆಯೆಂಬುದನ್ನು ಓದುಗರು ಹೇಳಬೇಕು'. ಎಂದಿದ್ದಾರೆ. ಈ ಮಾತನ್ನು ಓದಿದಾಗ, ವಚನ ಭಾರತವನ್ನು ಆಮೂಲಾಗ್ರವಾಗಿ ಅನೇಕಸಲ ಓದಿ ಆನಂದಪಟ್ಟ ನನಗೆ- 'ಆಪರಿತೋಷಾದ್ವಿದುಷಾಂನ ಸಾಧುಮನ್ಯೆ ಪ್ರಯೋಗವಿಜ್ಞಾನಂ' ಎಂಬ ಕಾಳಿದಾಸನ ಉಕ್ತಿಯ ನೆನಪಾಯ್ತು. 'ವಚನ ಭಾರತ'ವು ಮಹಾಭಾರತದ ಎಲ್ಲಾ ಭಾಗಗಳನ್ನು ಒಳಗೊಂಡಿರದಿದ್ದರೂ ದಿಗ್ಗಜದ ರೂಪರೇಷೆಗಳ ಸ್ಪುಟವಾದ ಪ್ರತಿಬಿಂಬವನ್ನು ಕನ್ನಡಿಯಲ್ಲಿ ಶಾಶ್ವತವಾಗಿ ಹಿಡಿದಿಟ್ಟಿರುವಂತೆ ತೋರದಿರದು. ಒಟ್ಟಿನಲ್ಲಿ, ಕೃಷ್ಣಶಾಸ್ತ್ರಿಗಳ ದೃಷ್ಟಿ ಮುಖ್ಯವಾಗಿ ಕಾವ್ಯದೃಷ್ಟಿ, ಸಾಹಿತಿಯ ದೃಷ್ಟಿ - ಕಥೆಯನ್ನು ರಸವತ್ತಾಗಿ ಹೇಳುತ್ತಾರೆ. ವರ್ಣನೆ, ಅಲಂಕಾರ, ಧರ್ಮ- ನೀತಿ ಎಲ್ಲಾ ಉಚಿತ ಪ್ರಮಾಣದಲ್ಲಿ ಹದವಾಗಿ ಹೊಂದಿಕೊಂಡು ಬರುತ್ತವೆ. ಸಂಸ್ಕೃತ ಮೂಲದಲ್ಲಿ ಯುದ್ಧ ವರ್ಣನೆಗಳು ಮತ್ತು ಧರ್ಮನೀತಿಗಳ ವಿವರಣೆಗಳು ಬಹು ವಿಸ್ತಾರವಾಗಿದ್ದುವು. ಕೃಷ್ಣಶಾಸ್ತ್ರಿಗಳು ಇವುಗಳಲ್ಲಿ ಕೇವಲ ಸಾರವತ್ತಾದುವನ್ನು, ಇಹ - ಪರ ಜೀವನಗಳಿಗೆ ಸಾಧಕವಾದಂಥವನ್ನು ಮಾತ್ರ ಬಳಸಿಕೊಂಡಿದ್ದಾರೆ. ಭೀಷ್ಮಪರ್ವದಿಂದ ಸೌಪ್ತಿಕ ಪರ್ವದ ವರೆಗಿನ ಐದು ಪರ್ವಗಳಲ್ಲಿ ಯುದ್ಧದ ವರ್ಣನೆಗಳನ್ನು ವಚನಭಾರತದಲ್ಲಿ ಕೇವಲ 53 ಪುಟಗಳಲ್ಲಿ ಅಳವಡಿಸಿದ್ದು ಒಂದು ಸಾಹಸವೇ, ಇಲ್ಲಿಯ ಕಥೆಯ ಓಟ ಮತ್ತು ಸಂಗ್ರಹ ಶಕ್ತಿಯನ್ನು ಕಂಡಾಗ 'ಪಂಪಭಾರತ'ದ ನೆನಪಾಗುತ್ತದೆ.

ಅತಿ ಶೃಂಗಾರ ಆಭಾಸ ಶೃಂಗಾರಗಳು ಮೂಲ ಭಾರತದಲ್ಲಿ ಇಲ್ಲ. ಕೆಲವು ಗ್ರಾಮ್ಯ ಹಾಗೂ ಅಶ್ಲೀಲ ಅಂಶಗಳು, ಚಪಲಚಿತ್ತರ ಕೈವಾಡದಿಂದ, ಪ್ರಕ್ಷೇಪಗಳಾಗಿ ಸೇರಿವೆ. ಅಂಥವನ್ನು ಅವರು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿದ್ದನ್ನು ಎತ್ತಿ ತೋರಿಸಿದ್ದಾರೆ. ಅವರ ಅಭಿಪ್ರಾಯದಲ್ಲಿ ಊರ್ವಶಿಯ ಶಾಪ ಪ್ರಸಂಗವೂ ಪೂರ್ತಿಯಾಗಿ ಇಂಥದ್ದು. ಅಲ್ಲದೆ, ಉತ್ತರ ಕುಮಾರ, ದುಶ್ಯಾಸನ, ಕೀಚಕ ಮುಂತಾದ ಪಾತ್ರಗಳ ಬಾಯಲ್ಲಿ ಹಾಕಿದ ಕೆಲವು ಮಾತುಗಳು ತೀರ ಆಭಾಸ, ತೀರ ನೀಚ ಮಟ್ಟದವು ಎಂದು ಸಂದೇಹ ಹುಟ್ಟಿದಾಗ ಸೂಕ್ತಂಕರರ ಪರಿಷ್ಕೃತ ಪಾಠದ ಆಧಾರದಿಂದ ಮತ್ತು ಸ್ವಂತ ಪಾಠ ಪರಿಶೋಧನೆಯ ಬಲದಿಂದ ಅಂಥವನ್ನು 'ವಚನಭಾರತ'ದಲ್ಲಿ ತೆಗೆದುಹಾಕಿದ್ದಾಗಿ ಹೇಳಿದ್ದಾರೆ. ಇದರಿಂದ 'ವಚನಭಾರತ'ದ ಸಾಹಿತ್ಯ ಸೌಂದರ್ಯ ಹಾಗೂ ಗಾಂಭೀರ್ಯ

ಇನ್ನಷ್ಟು ಹೆಚ್ಚಿದೆ.

ಮೂಲ ಮಹಾಭಾರತದಲ್ಲಿಯ ಸ್ವಾರಸ್ಯಕರ ಘಟನೆಗಳನ್ನು, ತಮ್ಮ ಬಿಗುವುಳ್ಳ ಗದ್ಯದಲ್ಲಿ ಒಡಮೂಡಿಸಿರುವ ಕೃಷ್ಣಶಾಸ್ತ್ರಿಗಳ ಕಲೆ ಅನುಪಮ. 'ವಚನ ಭಾರತ'ವನ್ನು ಓದುತ್ತಿದ್ದಾಗ, ಇಂದಿನ ಶ್ರೇಷ್ಠ ಕಾದಂಬರಿಯನ್ನು ಓದಿದಂತೆ ಭಾಸವಾಗುತ್ತದೆ. ಉದಾಹರಣೆಗೆ ದ್ರೋಣಾಚಾರ್ಯನು, ತನ್ನ ಶಿಷ್ಯರ ಧನುರ್ವಿದ್ಯಾ ಪರೀಕ್ಷೆ ನಡೆಸಿದ ಈ ಸನ್ನಿವೇಶ ಚಿತ್ರಣವನ್ನು ನೋಡಬಹುದು : (ಪುಟ :21) 'ಧನುರ್ವಿದ್ಯಾ ಪರಿಣತರಾದ ತನ್ನ ಶಿಷ್ಯರನ್ನು, ಗುರಿ ಹೊಡೆಯುವುದರಲ್ಲಿ ಪರೀಕ್ಷಿಸಲು ದ್ರೋಣನು ಒಂದು ಏರ್ಪಾಡು ಮಾಡಿದನು ; ಶಿಲ್ಪಿಯಿಂದ ಒಂದು ಕೃತ್ರಿಮವಾದ ಭಾಸ ಪಕ್ಷಿಯನ್ನು ಮಾಡಿಸಿ, ಅದನ್ನು ಅವರಿಗೆ ತಿಳಿಯದಂತೆ, ಒಂದು ಮರದ ತುದಿಗೊಂಬೆಗೆ ಕಟ್ಟಿಸಿ, ಎಲ್ಲರನ್ನೂ ಕರೆದು 'ಹುಡುಗರಿರಾ! ನೀವು ನಿಮ್ಮ ನಿಮ್ಮ ಬಿಲ್ಲು-ಬಾಣಗಳನ್ನು ತಂದು ಈ ಮರದ ಎದುರಾಗಿ ನಿಂತುಕೊಳ್ಳಿ : ನಾನು ಹೇಳಿದಾಗ ಅಗೋ, ಆ ಹಕ್ಕಿಯ ತಲೆಗೆ ಹೊಡೆದು ಅದನ್ನು ಬೀಳಿಸಬೇಕು ; ನಾನು ಒಬ್ಬೊಬ್ಬರನ್ನಾಗಿ ಕರೆಯುತ್ತೇನೆ ! ಎಂದು ಹೇಳಿ, ಮೊದಲು ಯುಧಿಷ್ಠಿರನನ್ನು ಕರೆದು, ಯುಧಿಷ್ಠಿರ ! ಬಾಣಸಂಧಾನ ಮಾಡಿಕೊಂಡು ಸಿದ್ಧನಾಗು ; ನಾನು ಹೇಳಿದಾಗ ಅದನ್ನು ಬಿಡು ! ಎಂದನು. ಯುದಿಷ್ಠಿರನು ಸಿದ್ಧನಾಗಲು, ಒಂದು ಕ್ಷಣ ಬಿಟ್ಟುಕೊಂಡು ದ್ರೋಣನು 'ಆ ಮರದ ತುದಿಯಲ್ಲಿರುವ ಹಕ್ಕಿ ಕಾಣುತ್ತಿದೆಯೆ, ರಾಜಕುಮಾರ !' ಎಂದು ಕೇಳಿದನು.

ಯುದಿಷ್ಠಿರ : 'ಕಾಣುತ್ತದೆ'

ದ್ರೋಣ : (ಇನ್ನೊಂದು ಕ್ಷಣ ಬಿಟ್ಟುಕೊಂಡು) 'ಆ ಮರ, ನಾನು, ನಿನ್ನ ತಮ್ಮಂದಿರು ಎಲ್ಲಾ ಕಾಣುತ್ತದೆಯೋ' ?

ಯುದಿಷ್ಠಿರ : 'ಆ ಮರ, ನೀವು, ನನ್ನ ತಮ್ಮಂದಿರು, ಹಕ್ಕಿ ಎಲ್ಲಾ ಕಾಣುತ್ತದೆ'.

'ಹೀಗೆಯೆ ಮತ್ತೆ ಮತ್ತೆ ಉತ್ತರ ಕೊಡಲು, ದ್ರೋಣನು ಅಸಂತುಷ್ಟನಾದವನಂತೆ - 'ಹೋಗು ಆಚೆ! ನಿನ್ನಿಂದ ಈ ಲಕ್ಷ್ಯವನ್ನು ಭೇದಿಸುವುದು ಸಾಧ್ಯವಿಲ್ಲ !' ಎಂದು ಕಳುಹಿಸಿ ಬಿಟ್ಟನು. ಅನಂತರ, ದುರ್ಯೋಧನ ಮೊದಲಾದವರನೆಲ್ಲಾ ಹೀಗೆಯೆ ಒಬ್ಬೊಬ್ಬರನ್ನಾಗಿ ಕರೆದು ಕೇಳಿದನು. ಎಲ್ಲರೂ ಹಾಗೆಯೇ ಉತ್ತರ ಕೊಟ್ಟರು. ಅನಂತರ ದ್ರೋಣನು, ನಗುಮುಖದಿಂದ ಅರ್ಜುನನನ್ನು ಕರೆದು,- 'ಮಗು ! ಈಗ ನೀನು ಇದನ್ನು ಹೊಡೆಯ ಬೇಕು. ನಾನು 'ಬಿಡು !' ಎಂದಾಗ ಬಾಣಬಿಡಬೇಕು, ಬಿಲ್ಲು ಬಗ್ಗಿಸಿ ಸಿದ್ಧನಾಗು !' ಎಂದನು. ಅದರಂತೆ ಆವನು ಬಿಲ್ಲನ್ನು ಗುಂಡಾಗಿ ಬಗ್ಗಿಸಿ ಲಕ್ಷ್ಯವನ್ನು ನೋಡುತ್ತ ನಿಲ್ಲಲು, ಒಂದು ಕ್ಷಣ ಬಿಟ್ಟುಕೊಂಡು, ದ್ರೋಣನು ಮಿಕ್ಕವರನ್ನು ಕೇಳಿದಂತೆಯೇ 'ಆ ಹಕ್ಕಿಯನ್ನೂ, ಮರವನ್ನೂ ನನ್ನನ್ನು ನೋಡುತ್ತಿದ್ದೀಯೋ ? ಎಂದು ಕೇಳಿದನು. ಅರ್ಜುನನು 'ಭಾಸಪಕ್ಷಿ ಮಾತ್ರ ಕಾಣುತ್ತದೆ ; ಮರವಾಗಲಿ, ನೀವಾಗಲಿ ಕಾಣುವುದಿಲ್ಲ !' ಎಂದು ಉತ್ತರ ಕೊಟ್ಟನು. ದ್ರೋಣನಿಗೆ ಸಂತೋಷವಾಯ್ತು. ಮತ್ತೊಂದು ಕ್ಷಣ ಬಿಟ್ಟು 'ಹಕ್ಕಿ ಕಾಣುತ್ತದೆಯೋ ? ಇನ್ನೊಂದು ಸಲ ಹೇಳು!' ಎಂದನು. ಅರ್ಜುನನು 'ಹಕ್ಕಿಯ ತಲೆ ಮಾತ್ರ ಕಾಣುತ್ತದೆ ; ಅದರ ಮೈ ಕಾಣುವುದಿಲ್ಲ' ಎಂದು ಉತ್ತರ ಕೊಟ್ಟನು. ಅರ್ಜುನನು ಹೀಗೆನ್ನುತ್ತಲೆ, ದ್ರೋಣನಿಗೆ ಪರಮ ಸಂತೋಷವಾಯ್ತು ; ಮೈ ರೋಮಾಂಚನಗೊಂಡಿತು. 'ಬಿಡು' ಎಂದನು. ಅರ್ಜುನನು ಬಾಣಬಿಟ್ಟನು. ಹರಿತವಾದ ಆ ಬಾಣವು ಛಟ್ಟನೆ

ಆ ಹಕ್ಕಿಯ ತಲೆಯನ್ನು ಕತ್ತರಿಸಿ ಕೆಳಕ್ಕೆ ಕೆಡವಿತು. ಹೀಗೆ, ಪರೀಕ್ಷೆಯಲ್ಲಿ ಅರ್ಜುನನು ಜಯಶೀಲನಾಗಲು, ದ್ರೋಣನು ಅವನನ್ನು ಆಲಂಗಿಸಿ, 'ಇನ್ನೇನು! ದ್ರುಪದನು ಸೋತಂತೆಯೇ ! ಎಂದು ತೃಪ್ತಿಗೊಂಡನು'.

-ಇದೊಂದು ಚಿಕ್ಕ ಸನ್ನಿವೇಶದ ನಿರೂಪಣೆ. ಈ ಧನುರ್ವಿದ್ಯಾ ಪರೀಕ್ಷೆಯಲ್ಲಿ ದ್ರೋಣನ ಮುಖ್ಯ ಉದ್ದೇಶವು ತನ್ನ ಶಿಷ್ಯರ ಪ್ರಗತಿಯ ಬೆಲೆಕಟ್ಟುವುದಷ್ಟೇ ಆಗಿರದೆ ತನ್ನ ಸ್ವಾರ್ಥದ ಉದ್ದೇಶವೂ ಒಂದಿತ್ತು ಎಂಬುದನ್ನು ಈ ನಿರೂಪಣೆ ಧ್ವನಿಸಿದೆ.

ಇಂಥ ರಸವತ್ತಾದ ಸನ್ನಿವೇಶಗಳು, ಸಂಭಾಷಣೆಗಳು, ನಾಟಕೀಯಾಂಶಗಳು ನೂರಾರು ಸಾವಿರಾರು 'ವಚನಭಾರತ' ದಲ್ಲಿ ಬಂದಿವೆ. ಬಕಾಸುರನ ಬಾಯಿಗೆ ತುತ್ತಾಗಬೇಕಾಗಿದ್ದ ಬ್ರಾಹ್ಮಣನ ವೃತ್ತಾಂತವನ್ನು ಅರಿತು, ಕುಂತಿಯು ಆ ಬ್ರಾಹ್ಮಣ ದಂಪತಿಗಳಿಗೆ ಧೈರ್ಯ ಹೇಳಿ ಸಹಾಯ, ಮಾಡಿದ ಸಂದರ್ಭವು ಇಂಥದೇ. ಅಳುವಿನಲ್ಲಿ ಆರಂಭವಾಗಿ ಸಂತೋಷದಲ್ಲಿ ಮುಗಿದ ಆ ಸಾಂಸಾರಿಕ ಚಿತ್ರವು ಆಧುನಿಕ ಸಣ್ಣಕತೆಯೇ ಆಗಿದೆ. ದ್ರೌಪದಿಯನ್ನು ಐವರು ಪಾಂಡವರು ಹಂಚಿಕೊಂಡು ಮದುವೆಯಾದದ್ದು, ಕೀಚಕವಧೆ ನಡೆದದ್ದು, ದುರ್ಯೋಧನನು ಘೋಷಯಾತ್ರೆಯಲ್ಲಿ ಅವಮಾನಪಟ್ಟದ್ದು ಮುಂತಾದವು ಇಂಥ ಕಥೆಗಳೇ. ಉತ್ತರ ಗೋಗ್ರಹಣದ ಘಟನಾವಳಿ ಕುಮಾರವ್ಯಾಸ ಭಾರತದಲ್ಲಿ ಬಹಳಷ್ಟು ವ್ಯತ್ಯಾಸಗೊಂಡಿದೆ. ಉತ್ತರನ ಪಾತ್ರ ಕುಮಾರವ್ಯಾಸನ ಹಾಸ್ಯಕ್ಕೆ ಹೆಸರಾಗಿದೆಯಷ್ಟೆ ? ಆದರೆ ಮೂಲ ಭಾರತದಲ್ಲಿ ಕೆಲಮಟ್ಟಿಗೆ ಹಾಸ್ಯ ಸುಳಿದಿದ್ದರೂ ಅಲ್ಲಿ ಉತ್ತರನು ಅಷ್ಟೊಂದು ಅಪಹಾಸ್ಯಕ್ಕೆ ಗುರಿಯಾಗಿಲ್ಲ. ಮೂಲವನ್ನು ಚಾಚೂ ತಪ್ಪದೆ ಅನುಸರಿಸಿದ ವಚನಭಾರತದಲ್ಲಿ, ಬೇರೊಂದು ಬಗೆಯ ಸೊಗಸು ಹೊಮ್ಮಿದೆ. ಉತ್ತರನಿಗೆ ಬೃಹನ್ನಳೆ ಸಾರಥಿಯಾದದ್ದು, ಗೋಗ್ರಹಣ ಯುದ್ಧಾರಂಭದಲ್ಲಿಯೆ ಉತ್ತರನಿಗೆ ಬೃಹನ್ನಳೆಯು ತನ್ನ ನಿಜರೂಪವನ್ನು ತಿಳಿಸಿಕೊಟ್ಟದ್ದು, ಆತನ ಭಯನಿವಾರಣೆಮಾಡಿ ಧೈರ್ಯತುಂಬಿದ್ದು , ಅನಂತರ ಉತ್ತರನು ತಾನೆ ಉತ್ಸಾಹದಿಂದ ಅರ್ಜುನನಿಗೆ ಸಾರಥ್ಯ ನಡೆಸಿದ್ದು- ಇವೆಲ್ಲ ಸಂದರ್ಭಗಳ ಚಿತ್ರಣವು, ವಿವರಗಳಲ್ಲಿ ಇಂದಿನ ಕಥೆ-ಕಾದಂಬರಿಗಳಲ್ಲಿ ದೊರೆಯುವ ನಾಟಕೀಯ ಕಲೆಯ ಉತ್ಕರ್ಷವನ್ನೆ ಉಕ್ಕಿಸುತ್ತದೆ.

ಅರಣ್ಯ ಪರ್ವದಲ್ಲಿ ಉಪಾಖ್ಯಾನಗಳಾಗಿ ಬಂದ ನಳೋಪಾಖ್ಯಾನ, ಸಾವಿತ್ರಿಯ ಉಪಾಖ್ಯಾನಗಳು ತುಂಬ ಉದ್ದವಾಗಿದ್ದು ಮಹಾಭಾರತದ ಮೂಲ ಕಥೆಗೆ ದೂರದ ಸಂಬಂಧವುಳ್ಳವು. ಆದ್ದರಿಂದ ಇದನ್ನು ವಚನಭಾರತದ ಕೊನೆಯಭಾಗದ ಅನುಬಂಧಕ್ಕೆ ಸೇರಿಸಬಹುದಿತ್ತು ಎನಿಸುವಂತಿದೆ. ಆದರೆ ಇವುಗಳಲ್ಲಿಯ ನಳ-ದಮಯಂತಿ, ಸಾವಿತ್ರಿ-ಸತ್ಯವಾನರ ದಾಂಪತ್ಯ ಜೀವನದ ಆದರ್ಶ ಚಿತ್ರಗಳು ಮನೋವೇಧಕವಾಗಿವೆ. ಇದನ್ನು ಅರಿತ ಕೃಷ್ಣಶಾಸ್ತ್ರಿಗಳು ಅವನ್ನು ಮುಖ್ಯ ಕಥೆಯೊಂದಿಗೆ ಸೇರಿಸಿ, 'ವಚನಭಾರತ'ದ ಸಮಷ್ಟಿ ಸೌಂದರ್ಯವನ್ನು ಹೆಚ್ಚಿಸಿದ್ದಾರೆ ಎಂದು, - ಮತ್ತೊಮ್ಮೆ ಯೋಚಿಸಿದಾಗ, ಮನದಟ್ಟಾಗುತ್ತದೆ. ಮೂಲ ಮಹಾಭರತದ ಅಸಂಖ್ಯ ಉಪಾಖ್ಯಾನಗಳಲ್ಲಿ ಯಾವುದನ್ನು ಆಯ್ದುಕೊಳ್ಳಬೇಕು ಯಾವುದನ್ನು ಬಿಡಬೇಕು ಎಂಬ ವಿಚಾರದಲ್ಲಿ ಕೃಷ್ಣಶಾಸ್ತ್ರಿಗಳ ಔಚಿತ್ಯಪ್ರಜ್ಞೆ ಸದಾ ಜಾಗೃತವಾದುದು.

'ವಚನ ಭಾರತ'ದ ಪೀಠಿಕಾಭಾಗದಲ್ಲಿ ಬಂದ ಮಹಾಭಾರತ ಹುಟ್ಟು-ಬೆಳವಣಿಗೆ, ಅದರ ಕಾಲ ಮತ್ತು ಕರ್ತೃತ್ವ-ಇವುಗಳ ವಿಚಾರವನ್ನು ಈ ಮೊದಲೆ ನೋಡಿದ್ದಾಗಿದೆ. ಈಗ ಅಲ್ಲಿ ಬಂದಿರುವ ಮಹಾಭಾರತದ ಕೆಲವು ಜೀವನ - ಸಮಸ್ಯೆಗಳ ವಿವೇಚನೆಯಲ್ಲಿ ಕೃಷ್ಣಶಾಸ್ತ್ರಿಗಳ ದೃಷ್ಟಿ-ಧೋರಣೆಗಳೇನು ಎಂಬುದನ್ನು ಸ್ಥೂಲವಾಗಿ ನೋಡಬಹುದು : ಮಹಾಭಾರತದಲ್ಲಿಯ ಧರ್ಮ-ನೀತಿಗಳ ಬಗ್ಗೆ ಚರ್ಚಿಸುತ್ತ, ಇಂದಿನ ಭಾರತೀಯರ ಹಾಗೂ ಪಾಶ್ಚಾತ್ಯರ ಅಡ್ಡದಾರಿಗಳನ್ನೂ ಸ್ವೇಚ್ಛಾ ವೃತ್ತಿಯನ್ನೂ ಟೀಕಿಸುತ್ತಾರೆ. ಇಂದು ಆರ್ಥಿಕ ಸ್ಥಿತಿಗಳಿಂದಲೂ ವ್ಯಕ್ತಿ ಸ್ವಾತಂತ್ರ್ಯಕ್ಕೆ ಅತಿಶಯವಾದ ಪ್ರಾಶಸ್ತ್ಯ ಕೊಡುತ್ತ ಬಂದಿರುವುದರಿಂದಲೂ ಸಂಸಾರದಲ್ಲಿ ವಿಶ್ವಾಸ, ವಿಧೇಯತೆ, ಒಗ್ಗಟ್ಟು ಮುಂತಾದ ಸ್ನೇಹಗುಣಗಳು ಕಡಮೆಯಾಗುತ್ತಿವೆ. ಸ್ನೇಹವಿಲ್ಲದ ಸಂಸಾರ ಎಂಥ ಸಂಸಾರ ? ಅದು ಮರಳುಕಾಡು ; ಇಲ್ಲದಿದ್ದರೆ ಕುರುಕ್ಷೇತ್ರ. ಜೊತೆಯಲ್ಲಿ ಇರಬೇಕಾದವರು ಅಹಿತವಾದರೆ ಅದು ಕಾಲಿನಲ್ಲಿ ಮುಳ್ಳು ಚುಚ್ಚಿ ಮುರಿದು ಕೊಂಡಂತೆ, ತೆಗೆದರೆ ಗಾಯ, ತೆಗೆಯದಿದ್ದರೆ ನೋವು ; ನಡಗೆ ಕುಂಟು, ಯಾವ ಕೆಲಸದಲ್ಲಿದ್ದರೂ ನೋವಿನ ಮೇಲೆ ಜ್ಞಾನ ; ಈ ನೋವು ಇಲ್ಲದಿರಬೇಕಾದರೆ ಪ್ರತಿಯೊಬ್ಬರಲ್ಲಿಯೂ ಸ್ವಾತಂತ್ರ್ಯ ಬುದ್ಧಿ ತಗ್ಗಬೇಕು. ಪ್ರತಿಯೊಬ್ಬರೂ ಅಲ್ಪ ಸ್ವಲ್ಪವಾದರೂ ತಮ್ಮ ತಮ್ಮ ಸುಖವನ್ನು ತ್ಯಾಗ ಮಾಡಿದ ಹೊರತು ಸುಖ ದೊರಕದು ; ಬುದ್ಧಿಯ ಜೊತೆಗೆ ಭಯ-ಭಕ್ತಿಗಳು ಸ್ವಲ್ಪವಾದರೂ ಇರಬೇಕು. ಸಂಸಾರದಲ್ಲಿ ಪ್ರೀತಿಯಿದ್ದರೆ, ಕ್ಷೇಮ, ತ್ಯಾಗ ಇವೆರಡು ತಾವೇ ಬರುತ್ತವೆ. ನಿಜವಾದ ಪ್ರೀತಿಗೆ ಇವೇ ಹೆಗ್ಗುರುತು.. ಇಂಥ ಒಂದು ಸಂಸಾರದ ಚಿತ್ರವನ್ನು ಬಕಾಸುರನಿಂದ ಪಾರಾದ ಬ್ರಾಹ್ಮಣನ ಕಥೆಯಲ್ಲಿ ನೋಡಬಹುದು ; ಸಾವಿತ್ರಿಯ ಉಪಾಖ್ಯಾನ, ನಳೋಪಾಖ್ಯಾನ ಮುಂತಾದ ಸಾಂಸಾರಿಕ ಉಪಾಖ್ಯಾನಗಳಲೆಲ್ಲ ಇರುವುದೇ ಈ ಪ್ರೀತಿ ಸ್ನೇಹಗಳ, ಸ್ವಾರ್ಥ ತ್ಯಾಗದ ಅಮೂಲ್ಯ ಚಿತ್ರ' ಎಂದು ಮುಂತಾಗಿ ವಿವರಿಸುತ್ತ ಧರ್ಮ-ನೀತಿಗಳ ಮೌಲ್ಯ ಗಳನ್ನು ಇಲ್ಲಿ ಸಮರ್ಥಿಸಲಾಗಿದೆ. 'ಮನುಷ್ಯನ ಸತ್ವ ಕಂಡುಬರುವುದು ಕಷ್ಟಪ್ರಾಪ್ತವಾದಾಗ. ಇದನ್ನು ಕುಂತಿ, ಸಾವಿತ್ರಿ, ದಮಯಂತಿ ಮುಂತಾದವರು ಹೇಗೆ, ಹಾರಾಡದೆ, ಧೈರ್ಯದಿಂದ, ತಾಳ್ಮೆಯಿಂದ ಎದುರಿಸಿದರು, ವಿವೇಕದಿಂದ ಶಾಂತಿ-ಸುಖ ಪಡೆದರು, ಸತ್ಯದಲ್ಲಿ ಧರ್ಮದಲ್ಲಿ ನಡೆದರು ಎಂಬುದನ್ನು ಭಾರತವು ಚೆನ್ನಾಗಿ ಚಿತ್ರಿಸಿದೆ. ಈ ಸ್ತ್ರೀಪಾತ್ರಗಳು ಹೆಂಗಸರಿಗೆ ಮಾತ್ರವಲ್ಲ ಗಂಡಸರಿಗೂ ಮಾರ್ಗದರ್ಶಕಗಳಾಗಿವೆ' ಎಂದು ಉದ್ಗಾರವೆತ್ತಿದ್ದಾರೆ ಕೃಷ್ಣಶಾಸ್ತ್ರಿಗಳು.

ಮಹಾಭಾರತದಲ್ಲಿಯ ಕಾವ್ಯಗುಣವನ್ನು ಕುರಿತು ಚರ್ಚಿಸುತ್ತ, 'ಕೃತಂ ಮಯೇದಂ ಭಗವನ್ ಕಾವ್ಯಂ ಪರಮ ಪೂಜಿತಂ'-ಎಂದರೆ 'ನನ್ನಿಂದ ಈ ಪರಮ ಪೂಜಿತಕಾವ್ಯ ಸೃಷ್ಟಿಯಾಗಿದೆ' ಎಂದು ವ್ಯಾಸರೇ ಬ್ರಹ್ಮನಿಗೆ ಹೇಳಿದ್ದನ್ನು ಇಲ್ಲಿ ಉದ್ಧರಿಸಿ ಸ್ಪಷ್ಟಪಡಿಸಲಾಗಿದೆ. ಮಹಾಭಾರತದಲ್ಲಿ ಸುಮಾರು ಅರ್ಧಭಾಗದಷ್ಟು ಧರ್ಮ-ನೀತಿಗಳು, ಉಳಿದರ್ಧ ಭಾಗದಲ್ಲಿ ಮುಖ್ಯಕಥೆ-ಉಪಕಥೆಗಳು ಬಂದಿವೆ. ಆದರೂ ಇದು ಪರಮ ಪೂಜಿತ ಕಾವ್ಯವೇ. ಆ ವಸ್ತುವೈಚಿತ್ರ್ಯ, ಪಾತ್ರ ವೈವಿಧ್ಯ, ಭಾವಸಂಪತ್ತು, ರಸಪ್ರವಾಹ, ಜೀವನ ವಿಮರ್ಶೆಗಳನ್ನು ಮುಂದಿನ ಸಾಹಿತ್ಯದಲ್ಲಿ ಎಲ್ಲಿ ತರೋಣ'? ಎಂದು ಕೇಳಿದ್ದಾರೆ ಕೃಷ್ಣಶಾಸ್ತ್ರಿಗಳು. ಅವರ ಈ ಉದ್ಗಾರವು ಅರ್ಥಪೂರ್ಣವಾಗಿದೆ. - ಸುಪ್ರಸಿದ್ಧ ಆಲಂಕಾರಿಕನಾದ ಆನಂದವರ್ಧನನು ಮಹಾಭಾರತವು ಶಾಸ್ತ್ರಕಾವ್ಯ ಛಾಯೆಯುಳ್ಳ ಗ್ರಂಥವಾದರೂ ಸಾರವತ್ತಾದ ಅರ್ಥವುಳ್ಳ ಉತ್ತಮ ಧ್ವನಿಕಾವ್ಯವೆಂದೂ ಅದರಲ್ಲಿ ಶಾಂತರಸವೂ

ವ್ಯಂಗ್ಯಮಾರ್ಗದಿಂದ ಬಹುಚೆನ್ನಾಗಿ ನಿರೂಪಿತವಾಗಿದೆಯೆಂದೂ ಶ್ಲಾಘಿಸಿದ್ದನ್ನು ಎತ್ತಿ ತೋರಿಸಲಾಗಿದೆ. ಆದರೂ ಮಹಾಭಾರತದ ಹಿನ್ನೆಲೆ **ದುಃಖ** ಎಂದು ಇಲ್ಲಿ ತೀರ್ಮಾನಿಸಲಾಗಿದೆ. 'ಪಾಂಡವರ ಕಷ್ಟಕಾರ್ಪಣ್ಯ, ಕೌರವ-ಪಾಂಡವ ವಂಶಗಳ ನಿರ್ಮೂಲನ, ಸಾವಿರಾರು ರಾಜರ ಸಾವು, 18 ಅಕ್ಷೌಹಿಣೀ ಸೈನ್ಯದ ಅಳಿವು. ಇಷ್ಟು ಕಷ್ಟ-ನಷ್ಟಗಳನ್ನು ಅನುಭವಿಸಿ, ಪಾಂಡವರು ಏನು ಸುಖಪಟ್ಟರೋ ! ಸ್ವಲ್ಪ ಕಾಲದಲ್ಲೆ ಅವರು ಮಹಾಯಾತ್ರೆ ಹೊರಟು ಸ್ವರ್ಗಸ್ಥರಾಗುತ್ತಾರೆ, ಸ್ವರ್ಗದಲ್ಲಿ ದುರ್ಯೋಧನ, ಕರ್ಣ, ಶಕುನಿಗಳೂ ಒಂದೇ ಧರ್ಮರಾಜನೂ ಒಂದೇ. ಅವರು ಯುದ್ಧದಲ್ಲಿ ಕಾದು ಮಡಿದದ್ದೇ ಸಾಕು, ಅದಕ್ಕೆ! ಪಾಂಡವರ ಜೊತೆಗೆ ಹೆಂಗಸರಲ್ಲಿ ದ್ರೌಪದಿಯೊಬ್ಬಳು ಸ್ವರ್ಗಕ್ಕೆ ಹೋದಳೆಂದು ತೋರುತ್ತದೆ. ಅವಳು ಯುದ್ಧದಲ್ಲಿ ಕಾದದೆ ಇದ್ದರೂ ಕಾದಿದವರನ್ನು ಉಸಿರಾಡುವುದಕ್ಕೆ ಅವಕಾಶವಿಲ್ಲದಂತೆ ಪ್ರೇರಿಸಿದವಳು, ಮೂದಲಿಸಿದವಳು, ಹಟಮಾಡಿದವಳು. ಅವಳು ಪಟ್ಟ ಕಷ್ಟ-ನಿಷ್ಠುರಗಳೂ ಹಾಗೆಯೇ ಇದ್ದುವೆನ್ನೋಣ ! ಕುಂತಿ ಕಷ್ಟಪಡಲಿಲ್ಲವೇ? ಅಂಬೆ, ಅಂಬಿಕೆ, ಅಂಬಾಲಿಕೆಯರು ಕಷ್ಟ ಪಡಲಿಲ್ಲವೇ ? ಆದರೆ ಅವರದು ಯಾರದ್ದೂ ಅಷ್ಟು ಆರ್ಭಟವಿಲ್ಲ. ಅವರು ಯಾರೂ ಅಷ್ಟು ರಾಜಸರಲ್ಲ, 'ಮಹಾಭಾರತದಲ್ಲಿ ಯಾರಾದರೂ ಗಂಡಸಿದ್ದರೆ ಅದು ದ್ರೌಪದಿ !' ಎಂದು ಯಾರೋ ಒಬ್ಬರು ಹೇಳಿದ್ದಾರೆ ! ಆದ್ದರಿಂದ ಅವಳು ಕಾದಿ ಮಡಿಯದಿದ್ದರೂ , ಗಂಡಂದಿರ ಜೊತೆಯಲ್ಲಿ ವೀರಸ್ವರ್ಗವನ್ನು ಅನುಭವಿಸಿದಳೆಂದು ತೋರುತ್ತದೆ ! ಮಿಕ್ಕ ಹೆಂಗಸರಿಗೆ ಬೆಂಕಿ, ಇಲ್ಲ ಕಾಡು ಇವೇ ಕೊನೆ!' ಎಂದು ಮುಂತಾಗಿ ಕೃಷ್ಣಶಾಸ್ತ್ರಿಗಳು ದ್ರೌಪದಿಯ ಬಗ್ಗೆ ಕಟುವಾದ ವ್ಯಂಗ್ಯವಾಡಿದ್ದಾರೆ. ಆದರೆ ಮರು ಕ್ಷಣದಲ್ಲಿಯೆ ಮಹಾಭಾರತದ ಸಮಗ್ರ ದೃಷ್ಟಿಯತ್ತ ಅವರ ಗಮನ ಹೊರಳುತ್ತದೆ. 'ಭಾರತವನ್ನು ಓದಿಮುಚ್ಚಿಟ್ಟರೆ ಬರುವುದು ಬರಬೇಕಾದದ್ದು ವೈರಾಗ್ಯ, ಶಾಂತಿ' ಎಂದು ಹೇಳಿದ ಆನಂದ ವರ್ಧನನ ಮಾತು ನೆನಪಾಗಿ, ದ್ರೌಪದಿಯ ಬಗೆಗೆ ಆಡಿದ ಒಂದು ಬಗೆಯ ವ್ಯಂಗ್ಯ ಟೀಕೆಯನ್ನು ಅವರು ಶಾಂತರಸದಲ್ಲಿ ಬೆರೆಸಿ ಬಿಡುತ್ತಾರೆ. ಮಹಾಭಾರತದ ಎಲ್ಲ ರಸ ಭಾವಗಳೂ ಶಾಂತರಸದಲ್ಲಿಯೇ ಪರ್ಯವಸಾಯಿಯಾಗುವ ಮಹತ್‌ಕಾವ್ಯಗುಣ ಮಹಾಭಾರತದ್ದು . ಇದನ್ನು ನೆನೆದು 'ಚಿತ್ತವಿಶ್ರಾಂತಿ' ತಳೆಯುವ ನೈಜಸಹೃದಯತೆ ಕೃಷ್ಣಶಾಸ್ತ್ರಿಗಳದ್ದು.

ಮಹಾಭಾರತದಲ್ಲಿಯ ಸನ್ಯಾಸ, ಯಜ್ಞ, ದಾನ, ತಪಸ್ಸುಗಳ ಬಗ್ಗೆ ವಿವೇಚಿಸುವಾಗ ಭಗವದ್ಗೀತೆಯ ಸಾರವನ್ನೆ ಸಾರವತ್ತಾಗಿ ಮಂಡಿಸಲಾಗಿದೆ. 'ಅಹಿಂಸೆಯ ಬಗ್ಗೆ ಕೊಡುವ ವಿವರಣೆ ತುಂಬ ಮನಮುಟ್ಟುವಂಥದ್ದು: ಅಹಿಂಸೆಯೆಂಬುದು ಅಪರಂಜಿಯ ಹಾಗೆ, ಶುದ್ಧ ಅಪರಂಜಿ ನಾಣ್ಯವಾಗುವುದಿಲ್ಲ ; ವ್ಯವಹಾರಕ್ಕೆ ಸಲ್ಲುವುದಿಲ್ಲ. ಅದಕ್ಕೆ ಸ್ವಲ್ಪವಾದರೂ ಪೆಡಸಾದ, ಕೆಚ್ಚನೆಯ ತಾಮ್ರ ಬೆರೆಯಬೇಕು. ದುಷ್ಟನಿಗ್ರಹಕ್ಕೆ ಕ್ರೌರ್ಯವೂ ಬೇಕು, ಹಿಂಸೆಯೂ ಬೇಕು. ಆ ಹಿಂಸೆ, ಹಿಂಸೆಯಲ್ಲ ಧರ್ಮ. ಮಹಾಭಾರತವು ಜಗತ್ತಿಗೆ ಸಾರುವ ಅಹಿಂಸೆಯ ಮರ್ಮವಿದು' ಎಂದು ಒತ್ತಿ ಹೇಳುತ್ತಾರೆ. ಮಹಾತ್ಮಗಾಂಧಿಯವರ ಅಹಿಂಸಾ ತತ್ವಕ್ಕೆ ಈ ವಿವರಣೆ ವಿರೋಧವಾಗಿದ್ದರೂ ಮಹಾಭಾರತದ ದೃಷ್ಟಿಯಿದು, ಇದನ್ನು ಕೃಷ್ಣಶಾಸ್ತ್ರಿಗಳು ಒಪ್ಪುತ್ತಾರೆ.

ಮಹಾಭಾರತದಲ್ಲಿಯ ಕಷ್ಟ-ಸುಖಗಳ ಸಮಸ್ಯೆಯನ್ನು ತುಂಬ ಮನೋರಂಜಕ ಹಾಗೂ ವಿಚಾರ ಪ್ರಚೋದಕ ರೀತಿಯಲ್ಲಿ ಚರ್ಚಿಸಿದ್ದಾರೆ. ಕೃಷ್ಣಶಾಸ್ತ್ರಿಗಳು ಹೇಳುತ್ತಾರೆ : 'ಮಹಾಭಾರತದಲ್ಲಿ ಕಷ್ಟ ಪಡದವರಾರು ? ದುಃಖವಿಲ್ಲದವರಾರು ? ಶಂತನುವಿನಿಂದ ಮೊದಲು ಮಾಡಿಕೊಂಡು ಶ್ರೀಕೃಷ್ಣನ ವರೆಗೆ ಎಲ್ಲರಿಗೂ ಕಷ್ಟ ತಪ್ಪಿದ್ದಲ್ಲ. ಪ್ರಪಂಚದಲ್ಲಿ ಕಷ್ಟವಿದೆ, ಅದು ಎಲ್ಲರಿಗೂ ಬರುತ್ತದೆ, ಎಲ್ಲರೂ ಅದನ್ನು ಅನುಭವಿಸಬೇಕಾದದ್ದೇ; ದೇವತೆಗಳಿಗೂ ಕಷ್ಟ ತಪ್ಪಿದ್ದಲ್ಲ - ಎಂದು ಮಹಾಭಾರತ ವ್ಯಕ್ತಿಗಳೆಲ್ಲರೂ ನಿರ್ಧರಿಸಿಕೊಂಡಂತೆ ಕಾಣುತ್ತದೆ. ಮಹಾಭಾರತ ಧರ್ಮಗ್ರಂಥ, ಪೂಜ್ಯವಸ್ತು, ಅದರಲ್ಲಿ ತಪ್ಪನ್ನು ಎಣಿಸಬಾರದು ಎಂಬ ಭಕ್ತಿ ಭಾವವನ್ನು ಸ್ವಲ್ಪ ಮರೆತು, ಅದರ ಕಥೆಯನ್ನು ಕಥೆಯಾಗಿ ವಿಮರ್ಶೆಮಾಡಿದರೆ, ಅದರಲ್ಲಿ ಮೊದಲಿನಿಂದಲೂ ದೈವಸಂಕಲ್ಪವೋ ಮನುಷ್ಯನ ಕರ್ಮವೋ ವಿಧಿಯ ವಕ್ರತೆಯೋ ನಡತೆಯಲ್ಲಿ ಎಡವಟ್ಟೋ ಕಂಡು ಬರುತ್ತದೆ. ಇವುಗಳಲ್ಲಿ ಯಾವುದು ಎಷ್ಟರ ಮಟ್ಟಿಗೆ ಮನುಷ್ಯನ ದುಃಖಕ್ಕೆ ಕಾರಣವೋ ಹೇಳುವುದಕ್ಕಾಗುವುದಿಲ್ಲ' ಎಂದು ಕೃಷ್ಣಶಾಸ್ತ್ರಿಗಳು ಓದುಗರ ಬುದ್ಧಿಗೆ ಪ್ರಾಮಾಣಿಕವಾಗಿ ಸವಾಲೆಸೆಯುತ್ತಾರೆ! ಕೊನೆಯಲ್ಲಿ , ಮಹಾಭಾರತ ಕಥಯಲ್ಲಿಯ ಅವಿವೇಕ ಪರಂಪರೆ, ಮತ್ತು ಕೊನೆಗೆ ಒದಗಿದ ಸರ್ವನಾಶ,- ಇದಕ್ಕೆಲ್ಲ ಏನು ಕಾರಣ ? ಎಂಬ ಪ್ರಶ್ನೆಗೆ ಮಹಾಭಾರತ ಕೊಡುವ ಉತ್ತರ 'ಕರ್ಮ' ಎಂದು ನಿರ್ಣಯಿಸಿದ್ದಾರೆ ಕೃಷ್ಣಶಾಸ್ತ್ರಿಗಳು.

ಮಹಾಭಾರತದ 'ಪರೋಪಕಾರಃಪುಣ್ಯಾಯ ಪಾಪಾಯ ಪರಪೀಡನಂ' ಎಂಬ ಬೀಜವಾಕ್ಯವನ್ನು ಹಿಂಜಿ ಹಿಂಜಿ ನೋಡಿ, 'ಕರ್ಮ'ದ ವಿಚಾರದಲ್ಲಿ ಇವರು ಬಹು ಆಳವಾದ ಚರ್ಚೆ ನಡೆಸುತ್ತಾರೆ. 'ಈ ಜನ್ಮದಲ್ಲಿ ಒಬ್ಬನು ಅನುಭವಿಸುವ ಕಷ್ಟ ಸುಖಗಳು, ಯಾವ ಯಾವ ಜನ್ಮದಲ್ಲಿ ಅವನು ಮಾಡಿದ ಯಾವ ಯಾವ ಕರ್ಮದ ಫಲವೋ ! ಎಂದು ಉದ್ಗರಿಸಿ, ಹಾಗಾದರೆ ಮಹಾಭಾರತ ಯುದ್ಧದಲ್ಲಿ ಹದಿನೆಂಟು ಅಕ್ಷೌಹಿಣಿ ಸೈನ್ಯ ಮಡಿಯಿತಲ್ಲ, ಅವರೆಲ್ಲರೂ ಒಂದೇ ವಿಧವಾದ ಕರ್ಮವನ್ನು -ಆ ಹದಿನೆಂಟು ದಿನಗಳಲ್ಲೆ ಫಲಕೊಡುವಂಥ ಕರ್ಮವನ್ನು ಮಾಡಿದ್ದರೇ ? ಎಂದು ಪ್ರಶ್ನಿಸಿ, 'ಹೌದು ಎನ್ನಲೇ ಬೇಕು' ಎಂದು ಕೃಷ್ಣಶಾಸ್ತ್ರಿಗಳು ಹೇಳುತ್ತಾರೆ. 'ಗಹನಾ ಕರ್ಮಣೋಗತಿಃ'- ಕರ್ಮದಗತಿಗಹನವೆಂಬುದನ್ನು ಅವರು ಬಲ್ಲರು ಆದರೂ, ಇಲ್ಲಿ 'ಒಂದೇ ವಿಧವಾದ ಕರ್ಮವನ್ನು' ಎಂಬ ಪದಗಳನ್ನು ಬಳಸಿದ್ದರ ಔಚಿತ್ಯವೇನು ? ನನಗಿದು ತುಂಬ ಗಹನವೆನಿಸಿದೆ ! ಕೃಷ್ಣಶಾಸ್ತ್ರಿಗಳು ಎಲ್ಲಿಯೂ ಅನಾವಶ್ಯಕವಾಗಿ, ವ್ಯರ್ಥವಾಗಿ ಪದಪ್ರಯೋಗ ಮಾಡಿದ್ದನ್ನು ನಾನು ಕಾಣೆ.

'ಕರ್ಮ' ಅಥವಾ ಮಾಡುವ ಕಾರ್ಯದ ಬಗ್ಗೆ ಮುಂದುವರಿಯುತ್ತಾ ಅವರು ಹೇಳುವ ಮಾತುಗಳು ಸದಾ ಮನನ ಮಾಡುವಂಥವು. 'ಸದ್ಗುಣಗಳೂ ಪುಣ್ಯಕಾರ್ಯಗಳೂ ಸುವಾಸನೆಯುಳ್ಳ ಹೂವು ಗಂಧಗಳಂತೆ. ಅವುಗಳ ಪರಿಮಳವು ಸುತ್ತಲೂ ಆನಂದವನ್ನು ಬೀರುತ್ತದೆ. ದುರ್ಗುಣಗಳೂ ಪಾಪಕಾರ್ಯಗಳೂ ಹೊಲಸಿನಂತೆ ಸುತ್ತಲೂ ದುರ್ನಾತವನ್ನು ಬೀರುತ್ತವೆ. ಆದ್ದರಿಂದ ಸುಜನ-ದುರ್ಜನರ ಪಾಪಪುಣ್ಯಗಳ ಪರಿಣಾಮವು ಅವರವರಲ್ಲಿಯೇ ಮುಗಿಯುವುದಿಲ್ಲ. ಅವರ ಸುತ್ತಿನಲ್ಲಿದ್ದವರಿಗೂ ವ್ಯಾಪಿಸುತ್ತವೆ. ಧರ್ಮಿಷ್ಠನ

ಗುಣದಿಂದ ಸುತ್ತಲೂ ಸುಭಿಕ್ಷೆ ನೆಲೆಸುವಂತೆ, ಪಾಪಿಯ ದೋಷದಿಂದ ಅನರ್ಥವೂ ಸಂಭವಿಸಬಹುದು. ಸಾಮಾನ್ಯ ಜನಗಳು ಸೊಡರಿನ ದೀಪಗಳ ಹಾಗೆ. ಕಣ್ಣುಕಾಣುವಷ್ಟು ಬೆಳಕಾಗಬೇಕಾದರೆ, ಅಂಥ ಹಲವು ದೀಪಗಳು ಬೇಕಾಗಬಹುದು. ಆದರೆ ತೇಜಶ್ಶಾಲಿಯೂ ಶೀಲಸಂಪನ್ನನೂ ಆದ ಮಹಾಪುರುಷನು ಚಂದ್ರ-ಸೂರ್ಯರಂತೆ ಒಬ್ಬೊಬ್ಬನೆ ಕತ್ತಲೆಯನ್ನು ಕಳೆದು ಬೆಳಕನ್ನೂ ಉಲ್ಲಾಸವನ್ನೂ ಉಂಟುಮಾಡಿಯಾನು. ಚಂದ್ರನ ಬೆಳಕಿಲ್ಲದ ಕಾಲದಲ್ಲಿ, ನಕ್ಷತ್ರಗಳ ಬೆಳಕೇ ಗತಿ. ಅವೂ ಕಾರ್ಮೋಡದಲ್ಲಿ ಮುಚ್ಚಿ-ಹೋದಾಗ, ನಮ್ಮ ಕೈ ಸೊಡರಿನಿಂದಲೇ ಬೆಳಕನ್ನು ಕಾಣಬೇಕು ; ದಾರಿಯನ್ನು ಕಂಡುಕೊಳ್ಳಬೇಕು. ಆದ್ದರಿಂದ ಸಣ್ಣ ಸಣ್ಣ ಸೊಡರುಗಳು, ಎಂದರೆ ವ್ಯಕ್ತಿಯ ಸುಗುಣಗಳು, ಪುಣ್ಯಕಾರ್ಯಗಳು ಅಲಕ್ಷ್ಯಮಾಡತಕ್ಕವಲ್ಲ. ಹನಿಗೂಡಿದರೆ ಹಳ್ಳ. ಈ ಮಾರ್ಗದಲ್ಲಿ ಧೈರ್ಯಕೊಡುವುವು 'ನಹಿಕಲ್ಯಾಣಕೃತ್ ಕಶ್ಚಿತ್ ದುರ್ಗತಿಂತಾತಗಚ್ಛತಿ' (ಒಳಿತನ್ನು ಮಾಡುವವನಿಗೆ ದುರ್ಗತಿಯಿಲ್ಲ')-ಎಂಬಂಥ ಗೀತೋಕ್ತಿಗಳು.' ಗಹನವೆನಿಸುವ ಕರ್ಮದ ವಿವೇಚನೆಯನ್ನು , ಅನುಭವಕ್ಕೆ ಮುಟ್ಟುವ ಉಪಮೆ, ರೂಪಕ,-ದೃಷ್ಟಾಂತಗಳಿಂದ, ಇದಕ್ಕಿಂತ ಚೆನ್ನಾಗಿ ಮಾಡುವುದು ಸಾಧ್ಯವೆ ?

ಇಂದಿನ ಪ್ರಪಂಚಕ್ಕೆ ಮಹಾಭಾರತ ನೀಡುವ ಸಂದೇಶವೇನು ? ಎಂಬ ಪ್ರಶ್ನೆಯನ್ನು ಇಲ್ಲಿ ಸುದೀರ್ಘವಾಗಿ ಚರ್ಚಿಸಲಾಗಿದೆ. ಅವರು ಹೇಳುವುದಿಷ್ಟು ! 'ಇಂದಿನ ಯುಗದ ಮುಖ್ಯ ಲಕ್ಷಣಗಳು ಮಾನವ ಸ್ವಾತಂತ್ರ್ಯ, ಧನಸಂಪತ್ತು. ಆದ್ದರಿಂದ ಎಲ್ಲ ವಿಧವಾದ ಕಟ್ಟುಗಳು ಸಡಿಲ, ತಂದೆ-ಮಗ, ಗಂಡ-ಹೆಂಡತಿ, ರಾಜ-ಪ್ರಜೆ, ಗುರು-ಶಿಷ್ಯ, ದೇವರು - ಭಕ್ತ ಹಾಗಿರಲಿ - ಈ ಸಂಬಂಧಗಳಲ್ಲಿ ಹಿಂದೆ ಇದ್ದ ಭಕ್ತಿ-ಗೌರವಗಳು ಹೋಗುತ್ತಿವೆ. ಹಿರಿದು-ಕಿರಿದು, ಮೇಲು-ಕೀಳು ಎಂಬ ಭಾವನೆಯೇ ಅನ್ಯಾಯವೆಂಬುದು ಕೆಲವರ ಭಾವ. ಹಣವಿದ್ದರೆ ಯಾವ ಸೌಕರ್ಯ ಸೌಭಾಗ್ಯಗಳನ್ನು ಬೇಕಾದರೂ ಪಡೆಯಬಹುದಾಗಿರುವುದರಿಂದ, ಆದಷ್ಟು ಬೇಗ ಹೆಚ್ಚು ಹಣ ಸಂಪಾದಿಸುವುದು ಎಲ್ಲರ ಗುರಿಯಾಗಿರುತ್ತದೆ, ಅದನ್ನು ಅಧರ್ಮಕ್ಕೂ ಅನ್ಯಾಯಕ್ಕೂ ಹೇಸದೆ, ಸಂಪಾದನೆ ಮಾಡಬೇಕೆನ್ನುತ್ತಾರೆ, ಮಾಡಿಯೂ ಮಾಡುತ್ತಾರೆ.... ಸಾಲದ್ದಕ್ಕೆ ಯಂತ್ರ ಕೈಗಾರಿಕೆಗಳಿಂದ, ಬಂಡವಾಳಗಾರ, ಕಾರ್ಮಿಕ ಎಂಬ ವರ್ಗಗಳು ಏರ್ಪಟ್ಟು, ಬಡವರಲ್ಲಿ ಬಡತನವೂ ಐಶ್ವರ್ಯವಂತರಲ್ಲಿ ಐಶ್ವರ್ಯವೂ ನಿರುದ್ಯೋಗ, ಹಸಿವು, ಅತೃಪ್ತಿಗಳೂ ದೊಡ್ಡನಗರಗಳೂ ಅವುಗಳ ಕಷ್ಟಗಳೂ ಆದ್ದರಿಂದ ಅಸಮಾಧಾನಗಳೂ ಹೆಚ್ಚುತ್ತಿವೆ. ವ್ಯಕ್ತಿಗಳಂತೆ ದೇಶಗಳೂ, ಕೆಲವು ಅತಿ ಪುಷ್ಟವಾಗಿ ಮಿಕ್ಕವು ಶೋಷಿಸಿ ಹೋಗಿವೆ. .....ಇಂದಿನ ಈ ಸಂಕೀರ್ಣ ಹಾಗೂ ವಿಷಮ ಪರಿಸ್ಥಿತಿಗೆ ಪರಿಹಾರ ಮಾರ್ಗವೇನು ? ಎಂಬ ಪ್ರಶ್ನೆಗೆ ಕೊನೆಯಲ್ಲಿ ಹೇಳುವ ಅವರ ಮಾತುಗಳಲ್ಲಿ ಮಹಾಭಾರತದ ಸಂದೇಶ ಅಡಗಿದೆ : 'ಇಂದು ಪ್ರಪಂಚವೇ ಒಂದು ಕುರುಕ್ಷೇತ್ರ. ಕೌರವ-ಪಾಂಡವರಂತೆ ಎರಡು ಪಕ್ಷಗಳು ಕತ್ತಿ ಹಿರಿದು - ಅಲ್ಲ, ಆಟಂ ಬಾಂಬು ಹಿಡಿದು-ಯುದ್ಧಕ್ಕೆ ಸಿದ್ಧವಾಗಿವೆ. ಲೋಕ ಹಿಂಸೆ ತಪ್ಪಿದರೆ ತಪ್ಪಲಿ ಪ್ರತಿ ಪಕ್ಷದವರಲ್ಲಿ ಹೋಗಿ ನಿರ್ವಂಚನೆಯಾಗಿ ಪ್ರಯತ್ನ ಮಾಡುತ್ತೇನೆ ಎಂದು ಹೇಳುವ ಸತ್ವಸಾಹಸಗಳುಳ್ಳ ಕೃಷ್ಣನಂಥ ವ್ಯಕಿಯೂ ಇಂದು ಯಾರೂ ಕಾಣಿಸುವುದಿಲ್ಲ. ಯುದ್ಧ ಸಿದ್ಧತೆಯೇ ಶಾಂತಿಗೆ ಮಾರ್ಗ, ಶತ್ರುನಿಗ್ರಹವೇ ಆತ್ಮರಕ್ಷಣೆಯ ಉತ್ತಮರೂಪ ಎಂದು ನಂಬಿ, -ಅನ್ನ, ಬಟ್ಟೆ, ವಸತಿ ಮುಂತಾದ ಶಾಂತ ಜೀವನ ಸೌಕರ್ಯಗಳಿಗಿಂತಲೂ ಸೇನೆ, ಮದ್ದು, ಗುಂಡು, ರಕ್ಷಣ ಸಾಧನೆ, ನಾಶಕ ಸಾಮಗ್ರಿ ಇವುಗಳಿಗೆ ಜನ ಗಮನ ಕೊಡುತ್ತಿದ್ದಾರೆ. ಪರಸ್ಪರ ಅಪನಂಬಿಕೆ, ಹೆದರಿಕೆ ಇವುಗಳಿಂದ ಮನಸ್ಸು ಕೆಡುತ್ತಿದೆ

..... ಐದನೆಯ ವೇದವಾದ, ಎರಡು ಸಾವಿರ ವರ್ಷದಷ್ಟು ಪ್ರಾಚೀನವಾದ ಭಾರತವು ಸದಾ ಕಾಲಕ್ಕೂ ತೋಳೆತ್ತಿ ಕೂಗಿ ಹೇಳುವ ಶಾಂತಿ ಮಾರ್ಗ ಇದೇ - ಆದರೆ ಅದನ್ನು ಯಾರು ಕೇಳುತ್ತಾರೋ ತಿಳಿಯದು. ಊರ್ಧ್ವ ಬಾಹುರ್ವಿರೋಮ್ಯೇಷನತುಕಶ್ಚಿತ್‌ಶ್ರುಣೋತಿಮಾಂ ! ಧರ್ಮಾದರ್ಥಶ್ಚ ಕಾಮಶ್ಚ ಸಕಿಮರ್ಥಂ ನಸೇವ್ಯತೇ' - ಮನುಷ್ಯನಿಗೆ ಬೇಕಾಗುವ ಅರ್ಥವೂ ಕಾಮವೂ ಧರ್ಮದಿಂದಲೇ ದೊರೆಯುವವು. ಅದನ್ನೇಕೆ ಸೇವಿಸುವದಿಲ್ಲ? ದುರ್ಯೋಧನ ವಿಧರ್ಮಿಯಾದ. ನ್ಯಾಯಕ್ಕೆ ಒಪ್ಪಲಿಲ್ಲ, ಶಾಂತಿಗೆ ಒಪ್ಪಲಿಲ್ಲ, ಸಂಧಿಗೆ ಒಪ್ಪಲಿಲ್ಲ. ಯುದ್ಧ ಅನಿವಾರ್ಯವಾಯ್ತು. ತಾನೂ ಹಾಳಾಗಿ ಸಾವಿರಾರು ಜನ ರಾಜರನ್ನೂ ಹದಿನೆಂಟು ಅಕ್ಷೌಹಿಣೀ ಸೇನೆಯನ್ನೂ ಬಲಿಕೊಟ್ಟನು. ಲೋಕದಲ್ಲಿ ಎಲ್ಲೆಲ್ಲೂ ಹೆಂಗಸರ, ಮಕ್ಕಳ, ದಿಕ್ಕಿಲ್ಲದವರ ಹಾಹಾಕಾರ, ಗೋಳು ಇದೇ ತುಂಬಿಹೋಯ್ತು. ಅವನಿಗೂ ಪಾಂಡವರಿಗೂ ವೀರ ಸ್ವರ್ಗಕಾದಿತ್ತೋ ಏನೋ ! ಅವರನ್ನು ನಂಬಿದ್ದ ಪ್ರಜೆಗಳಿಗಂತೂ ವೀರ ನರಕವೇ.' - ಇಲ್ಲಿ ಕೃಷ್ಣಶಾಸ್ತ್ರಿಗಳ ಲೆಕ್ಕಣಿಕೆ ಶಸ್ತ್ರದಂತೆ ಹರಿತವಾಗಿದೆಯಲ್ಲವೆ? ಹೌದು, ಕರುಳಿನ ಬೇನೆಯನ್ನು ಶಸ್ತ್ರಚಿಕಿತ್ಸೆಯಿಂದ ನಿವಾರಿಸುವ ಕರುಣಾಳು ವೈದ್ಯನ ಶಸ್ತ್ರ ಹರಿತವದು !

ಕೊನೆಯ ಮಾತು : 'ವಚನಭಾರತ'ದ ಮತ್ತು ಪೀಠಿಕೆಯ ಈ ಅವಲೋಕನವು ಸ್ಥೂಲವಾದುದು ಮಾತ್ರ. ಇದರಲ್ಲಿ ಕೃಷ್ಣಶಾಸ್ತ್ರಿಗಳ ಮಾತುಗಳನ್ನೇ ಹೆಚ್ಚಾಗಿ ಬಳಸಿಕೊಂಡು ಅವರ ಗದ್ಯಶೈಲಿಯ ಪ್ರತ್ಯಕ್ಷ ಪರಿಚಯ ಮಾಡಿಕೊಡಲು ಯತ್ನಿಸಿದ್ದೇನೆ. ಕೃಷ್ಣಶಾಸ್ತ್ರಿಗಳ ವ್ಯಾಸಂಗದ ಆಳ-ಅಗಲ, ಮಹಾಭಾರತದ ಸಮಗ್ರ ದೃಷ್ಟಿ, ಸಂಗ್ರಹಶಕ್ತಿ, ಸಂಶೋಧನಾ ನೈಪುಣ್ಯ, ವಿಮರ್ಶನ ವಿವೇಕ, ಧರ್ಮ - ನೀತಿ-ಜಿಜ್ಞಾಸೆ, ಆರೋಗ್ಯಕರ ಕಾವ್ಯಾಭಿರುಚಿ, ಸಹೃದಯತೆ, ತಾತ್ವಿಕ ವಿವೇಚನೆ, ಪ್ರಪಂಚದ ಸೂಕ್ಷ್ಮಾವಲೋಕನ, ಇಂದಿನ ನಾಗರಿಕತೆಯ ಅರಿವು, ಆಶಂಕೆ, ಎಲ್ಲದರಲ್ಲೂ ಉಚಿತಾನುಚಿತ ಪ್ರಜ್ಞೆ, - ಇವೆಲ್ಲಕ್ಕೂ ಮಿಗಿಲಾಗಿ ವಿಶಿಷ್ಟ ಗದ್ಯಶೈಲಿಯ ಹದ - ಇವೇ ಮುಂತಾದ ಶ್ರೇಷ್ಠ ಬರಹಗಾರನ ಲಕ್ಷಣಗಳಿಗೆ ಕನ್ನಡಿ ಹಿಡಿದಂತಿದೆ ಈ ಪೀಠಿಕೆ ಮತ್ತು ವಚನಭಾರತ ಕಥೆ. ಅಂತೇ ಈ ಪೀಠಿಕಾಭಾಗವೂ 'ವಚನಭಾರತ' ಮಹಾಸೌಧಕ್ಕೆ ಸುವರ್ಣದ ಮಹಾದ್ವಾರವಾಗಿದೆ.

13-12-1981

# ಮಹಾಭಾರತದ ಭೀಷ್ಮಾಚಾರ್ಯರು

ಎಸ್.ಆರ್.ಮಳಗಿ

ಮಹಾಭಾರತದ ಭೀಷ್ಮಾಚಾರ್ಯರ ಪಾತ್ರವು ಈ ರಾಷ್ಟ್ರೀಯ ಮಹಾಕಾವ್ಯದ ಉದ್ದಕ್ಕೂ ಮಹೋನ್ನತವಾಗಿ ವ್ಯಾಪಿಸಿ ನಿಂತುದು. ಹಾಗೆಯೇ ತುಂಬ ಜಟಿಲವಾಗಿಯೂ ಮೆರೆದಿದೆ. 'ಅತ್ಯುನ್ನತಿಯೊಳ್ ಸಿಂಧೂದ್ಭವಂ ಎಂದು ಕನ್ನಡದ ಪಂಪ ಮಹಾಕವಿ ಉದ್ಗರಿಸಿದ್ದಾನೆ. ಈ ಅತ್ಯುನ್ನತಿ ಭೀಷ್ಮರಿಗೆ ಅದೆಷ್ಟು ಆತ್ಮತೃಪ್ತಿ ಕೊಟ್ಟಿತೋ ಇಂದಿನ ನಮಗೆ ತಿಳಿಯದು. ಶಾಪಗ್ರಸ್ತ ಶಂತನು ಮಹಾರಾಜನಿಗೆ, ಶಾಪಗ್ರಸ್ತ ಗಂಗೆಯಲ್ಲಿ ಹುಟ್ಟಿದ ಇವರೂ ಶಾಪಗ್ರಸ್ತರೇ. ಬಾಲ್ಯದಲ್ಲಿಯೇ ನಿರ್ದಯದಿಂದ ತೊರೆದು ಹೋದ ತಾಯ ಅಗಲಿಕೆಯಿಂದ ತಬ್ಬಲಿತನವನ್ನು ಭೋಗಿಸಬೇಕಾಯ್ತು. ಆದರೂ ತಂದೆಯ ಪ್ರೀತಿಯಲ್ಲಿ ತೇಜಸ್ವಿಯಾಗಿಯೇ ಬೆಳೆದರು. ಶಸ್ತ್ರ - ಶಾಸ್ತ್ರಗಳಲ್ಲಿ ಅದ್ವಿತೀಯರೆನಿಸಿದರು. ಆದರೆ ಪ್ರಬುದ್ಧ ವಯಸ್ಸಿಗೆ ಬಂದಾಗ, ಸ್ತ್ರೀ ಲೋಲುಪನಾಗಿದ್ದ ತಂದೆಯ ಸಮಸ್ಯೆಯನ್ನು ಭೀಷ್ಮರೇ ಬಿಡಿಸಬೇಕಾಯ್ತು. ದಾಶರಾಜನ ಪುತ್ರಿ ಸತ್ಯವತಿಯನ್ನು ಶಂತನು ಬಯಸಿದ. ದಾಶರಾಜನ ಕರಾರುಗಳಿಗೆ ಒಪ್ಪಿ ಆತನ ಮಗಳನ್ನು ತಂದೆಗೆ ತಂದೊಪ್ಪಿಸಿದರು. ತಂದೆಯ ಎರಡನೆಯ ಪ್ರೇಮ ವಿವಾಹವನ್ನು ಮಗನೇ ನಿಂತು ಮಾಡಿದ, ಇನ್ನಿಲ್ಲ ಮುನ್ನಿಲ್ಲದ ಘಟನೆ ಇದು. ಆಮರಣ ಬ್ರಹ್ಮಚರ್ಯ ವ್ರತ ಕೈಕೊಂಡ ದೇವವ್ರತ ಈ ಪ್ರತಿಜ್ಞೆಯಿಂದಾಗಿ ಭೀಷ್ಮಾಚಾರ್ಯ ಎನಿಸಿದ. ದುಸ್ಸಾಧ್ಯವಾದುದನ್ನು ಸಾಧ್ಯಗೊಳಿಸಿದನೆಂದು ತೃಪ್ತಿಗೊಂಡ ತಂದೆ, ಮಗನಿಗೆ ಸ್ವಚ್ಛಂದ ಮರಣದ ವರವಿತ್ತು ಆಶೀರ್ವದಿಸಿದನಂತೆ!' ಆದರ್ಶವಾದಿಯಾಗಿ ಬದುಕಿ, ಇತರರನ್ನು ಹಾಗೇ ಬದುಕಿಸಬೇಕೆಂಬ ಭೀಷ್ಮರಿಗೆ ಈ ವರವೂ ಒಂದು ಶಾಪವೇ ಆಗಿದ್ದಿತೇನೋ! ಸತ್ಯವತಿಯಲ್ಲಿ ಇಬ್ಬರು ಪುತ್ರರನ್ನು ಪಡೆದು ಶಂತನು ಕಣ್ಮುಚ್ಚಿದಾಗ ಈ ರಾಜ ಮನೆತನದ ಮತ್ತು ರಾಜ್ಯಾಡಳಿತದ ಎಲ್ಲ ಭಾರವನ್ನು ಭೀಷ್ಮರೇ ಹೊರಬೇಕಾಯ್ತು. ತನ್ನ ಸ್ವಂತದ್ದೆಂಬ ಸಂಸಾರವಿಲ್ಲದಿದ್ದರೂ ಮಕ್ಕಳು-ಮೊಮ್ಮಕ್ಕಳೆಂಬವರ ಸಂಸಾರಗಳ ಸರಮಾಲೆಯನ್ನೇ ಧರಿಸಿ ನಡೆಯಬೇಕಾಯ್ತು. ಯುವರಾಜ ವಿಚಿತ್ರವೀರ್ಯನಿಗಾಗಿ ಕಾಶೀರಾಜನ ಪುತ್ರಿಯರನ್ನು ಸ್ವಯಂವರ ಮಂಟಪದಿಂದ ಗೆದ್ದು ತಂದು ಮದುವೆ ಮಾಡಿಸಿದರು. ವಿಚಿತ್ರವೀರ್ಯ ಕ್ಷಯರೋಗದಿಂದ ಮಡಿದಾಗ ಮತ್ತೆ ಸಮಸ್ಯೆ ಉದ್ಭವಿಸಿತು. ಸಂತಾನ ಮುಂದುವರಿಯಲೆಂದು ಸತ್ಯವತಿ ಭೀಷ್ಮರಿಗೆ ಸಂಸಾರವೊಂದಿಗರಾಗಿ, ರಾಜ್ಯಾಭಿಷಿಕ್ತರಾಗಿ, ರಾಜ್ಯವಾಳಬೇಕೆಂದು ಬೋಧಿಸಿದಾಗ, ಭೀಷ್ಮರು: - "ತಾಯೀ, ನೀನು ಧರ್ಮವನ್ನು ಬಲ್ಲವಳು. ಹಿಂದೆ ನಿನಗೆ ವಚನ ಕೊಟ್ಟಾಗಿದೆ. ಆ ಪ್ರತಿಜ್ಞೆಯನ್ನು ಇಂದೂ ಮತ್ತೊಮ್ಮೆ ಮಾಡುವೆ. ಮೂರು ಲೋಕದ ರಾಜ್ಯವೂ ನನಗೆ ಬೇಡ, ದೇವೇಂದ್ರ ಪದವಿಯೂ ಬೇಡ, ಅದಕ್ಕಿಂತ ಅಧಿಕವಾದುದೂ ಬೇಡ. ಸತ್ಯವನ್ನು ಮಾತ್ರ ಬಿಡಲಾರೆ". ಎಂದು ಉತ್ತರಿಸಿದರು. ಸತ್ಯವತಿ ತನ್ನ ಇನ್ನೊಬ್ಬ ಮಗ ಕೃಷ್ಣದ್ವೈಪಾಯನ ವ್ಯಾಸರಿಂದ ಸಂತಾನ ಮುಂದುವರಿಯುವ ಏರ್ಪಾಟು ಮಾಡಿದಳು. ಧೃತರಾಷ್ಟ್ರ, ಪಾಂಡು, ವಿದುರರು ಹುಟ್ಟಿ, ಅವರ ಲಾಲನೆ-ಪಾಲನೆಗಳ ಹೊಣೆ ಹೊತ್ತು, ಅವರ ಹೆಸರಲ್ಲಿ ಭೀಷ್ಮರೇ ರಾಜ್ಯಭಾರ ನಡೆಸಬೇಕಾಯ್ತು. ಧೃತರಾಷ್ಟ್ರ ಕುರುಡನಾಗಿದ್ದರಿಂದ ಪಾಂಡುವೇ ರಾಜನಾದ. ಪಾಂಡು ತಪೋವನಕ್ಕೆ ಹೋಗಬೇಕಾದಾಗ ಭೀಷ್ಮರೇ ಮತ್ತೆ ರಾಜ್ಯಭಾರ ವಹಿಸಿದರು. ಪಾಂಡುವಿನ ಮರಣಾನಂತರ, ಧೃತರಾಷ್ಟ್ರ ಪುತ್ರರಿಗೂ ಪಾಂಡು ಪುತ್ರರಿಗೂ ಘೋರ ವೈರ ಬೆಳೆದುದನ್ನು ಎಂಭತ್ತರ

ಮುಪ್ಪಿನಲ್ಲಿ ಇವರು ಕಾಣಬೇಕಾಯ್ತು. ದುರ್ಯೋಧನಾದಿಗಳ ದೌರ್ಜನ್ಯವನ್ನು ನಿಯಂತ್ರಿಸಲಾರದೆ ಹತಾಶೆಗೊಳ್ಳಬೇಕಾಯ್ತು. ಕಪಟ ದ್ಯೂತ ಪ್ರಸಂಗ, ದ್ರೌಪದಿಯ ಮಾನಭಂಗ, ಪಾಂಡವರ ವನವಾಸಾದಿಗಳನ್ನು ಅಸಹಾಯಕತೆಯಿಂದಲೇ ನೋಡಿ ದುಃಖಿಸಬೇಕಾಯ್ತು. ಆಗ ಭೀಷ್ಮರ ಮಾತಿಗೆ ಕಿವಿಗೊಡುವವರೇ ಇರಲಿಲ್ಲ. ದ್ರೌಪದಿಯ ಮಾನಭಂಗವು ಧೃತರಾಷ್ಟ್ರನ ರಾಜ ಸಭೆಯಲ್ಲಿ ನಡೆದುಹೋಯ್ತು. ಇದು ರಾಜಸಭೆಯೆ? ಇಲ್ಲಿ ಕುಳಿತವರು ಹಿರಿಯರೇ? ಎಂದು ದ್ರೌಪದಿ ಆಕ್ರೋಶಿಸಿದಾಗ, ಭೀಷ್ಮರಂಥವರೂ ಕೈಚೆಲ್ಲಿ ಕುಳಿತರು. ಇದು ಹೋಗಲಿ, ಪಾಂಡವರ ಅಜ್ಞಾತವಾಸದ ಕೊನೆಯಲ್ಲಿ ನಡೆದ ಗೋ ಗ್ರಹಣ ಯುದ್ಧದಲ್ಲಿ ದುರ್ಯೋಧನನ ಸೈನ್ಯಕ್ಕೆ ಭೀಷ್ಮರೂ ಒಬ್ಬ ಸೇನಾಧಿಪತಿ ! ಅನಂತರ ನಡೆದ ಕುರುಕ್ಷೇತ್ರದ ಮಹಾಯುದ್ಧದಲ್ಲಿ ಕೌರವರ ಸೇನಾನಿಯಾಗಿ ಹೋರಾಡಿದವರೂ ಭೀಷ್ಮರೇ ! ಕೊನೆಯಲ್ಲಿ ತಮ್ಮ ಶಸ್ತ್ರ ಸನ್ಯಾಸದ ಗುಟ್ಟನ್ನು ಧರ್ಮರಾಜನಿಗೆ ತಿಳಿಸಿ ಶರ ಶಯ್ಯೆಯಲ್ಲಿ ವಿಶ್ರಾಂತಿ ಹೊಂದಿದರು. ಪಾಂಡವ-ಕೌರವರಿಬ್ಬರಿಗೂ ಅವರು ಕೊನೆಯವರೆಗೆ ಪೂಜ್ಯ ಸ್ಥಾನದಲ್ಲಿದ್ದರು. ಭೀಷ್ಮಾಚಾರ್ಯರ ಪಾತ್ರದ ಮಹೋನ್ನತಿಯ ಪರಿಕಲ್ಪನೆ ಅಸಾಮಾನ್ಯತೆಯ ಜತೆಗೆ ತುಂಬ ಜಟಿಲವಾದುದಲ್ಲವೇ?

# ಬಾಹುಬಲಿಯನ್ನು ಕುರಿತು

## ಎಸ್.ಆರ್. ಮಳಗಿ

ಶ್ರವಣಬೆಳ್ಗೊಳದ ಉನ್ನತ ಗೊಮ್ಮಟೇಶ್ವರ ವಿಗ್ರಹವು ಬಾಹುಬಲಿಯ ಭವ್ಯ ಸ್ಮಾರಕ. ಗೊಮ್ಮಟನೆಂಬ ಪರ್ಯಾಯ ನಾಮವುಳ್ಳ ಬಾಹುಬಲಿಯ ಮಹಾ ಮಸ್ತಕಾಭಿಷೇಕದ ವರ್ಷವಿದು. ಆದಿ ತೀರ್ಥಂಕರ ವೃಷಭನಾಥನ ಹಿರಿಯ ಮಗ ಭರತ ಚಕ್ರವರ್ತಿ. ಈತನ ತಮ್ಮನೇ ಬಾಹುಬಲಿ. ಇನ್ನಿತರ ಸೋದರ-ಸೋದರಿಯರೂ ಇದ್ದರು.

ಜಿನಸೇನನ 'ಪೂರ್ವ ಪುರಾಣ'ದಲ್ಲಿ ಮತ್ತು ಕನ್ನಡದ ಪಂಪ ಕವಿಯ 'ಆದಿ ಪುರಾಣ'ದಲ್ಲಿ ಭರತ-ಬಾಹುಬಲಿಗಳ ಯುದ್ಧ ಪ್ರಸಂಗವೊಂದು ಬಂದಿದೆ. ಸೋದರ-ಸಂಬಂಧಿ ಈ ಯುದ್ಧ ಪ್ರಸಂಗದಿಂದಲೆ ಬಾಹುಬಲಿಯ ಚಾರಿತ್ರ್ಯದ ಮಹೋನ್ನತಿ ಚಿರಂತನವಾಗಿ ಮೆರೆದಿದೆ. ಈ ಸನ್ನಿವೇಶವೇ ಈಗ ಪ್ರಸ್ತುತ. ಅದು ಹೀಗಿದೆ :-

ತಂದೆ ವೃಷಭದೇವನು ವೈರಾಗ್ಯ ದೀಕ್ಷೆ ತೊಟ್ಟು ತಪಶ್ಚರ್ಯೆಗೆ ತೊಡಗಿದಾಗ, ಭರತನು ಚಕ್ರವರ್ತಿಯಾಗುತ್ತಾನೆ. ಬಾಹುಬಲಿಯನ್ನೊಳಗೊಂಡು ಆತನ ತಮ್ಮಂದಿರೆಲ್ಲರು ತಂದೆಯ ಆದೇಶದಂತೆ ತಂತಮ್ಮ ರಾಜ್ಯಗಳಲ್ಲಿ ಆಳತೊಡಗುತ್ತಾರೆ. ಭರತನ ಆಯುಧಾಗಾರದಲ್ಲಿ ಚಕ್ರರತ್ನದ ಉದ್ಭವವಾದಾಗ, ಸಂಪ್ರದಾಯದಂತೆ ಅದನ್ನು ಮುಂದಿರಿಸಿಕೊಂಡು ಆತನು ದಿಗ್ವಿಜಯಕ್ಕೆ ಹೊರಡುತ್ತಾನೆ. ಭರತನು ಷಟ್ಖಂಡ ಭೂಮಂಡಲವನ್ನು ಗೆಲ್ಲುತ್ತಾನೆ. ದಿಗ್ವಿಜಯವು ಯಶಸ್ವಿಯಾಗುತ್ತಲೆ ಚಕ್ರವರ್ತಿಯ ಗರ್ವ ನೆತ್ತಿಗೇರುತ್ತದೆ. ವೃಷಭಾದ್ರಿಯ ಬಂಡೆಯೊಂದರ ಮೇಲೆ ತನ್ನ ವಿಜಯ ಪ್ರಶಸ್ತಿಯನ್ನು ಕೆತ್ತಿಸಲು ಇಚ್ಛಿಸುತ್ತಾನೆ. ಆದರೆ ಆ ಪ್ರಶಸ್ತಿ ಭಿತ್ತಿಯ ತುಂಬ ಹಿಂದಣ ಚಕ್ರವರ್ತಿಗಳ ಪ್ರಶಸ್ತಿಗಳೇ ಕಿಕ್ಕಿರಿದು ತುಂಬಿದ್ದರಿಂದ ಈತನ ಪ್ರಶಸ್ತಿಗೆ ಸ್ಥಳವೇ ಇರಲಿಲ್ಲ! ದಿಗ್ವಿಜಯಾನಂತರ ಆತನಿಗೆ ಇದೊಂದು ದೊಡ್ಡ ಆಘಾತದ ಪೆಟ್ಟು. ತಾನೇ ಷಟ್ಖಂಡ ವಿಜಯಿಯೆಂದು ಬಿಮ್ಮನೆ ಬೀಗಿದ್ದ ಚಕ್ರವರ್ತಿಯ ಗರ್ವರಸ ಸೋರಿ ಹೋಯ್ತು. ಕ್ಷಣಾರ್ಧದಲ್ಲಿ ಸೊಕ್ಕು ಮರುಕಳಿಸಿ, ಆ ಬಂಡೆಯ ಮೇಲಿನ ಪ್ರಶಸ್ತಿಗಳಲ್ಲಿ ಒಂದನ್ನು ಅಳಿಸಿ, ತನ್ನದನ್ನು ಕೆತ್ತಿಸುತ್ತಾನೆ. ಮುಂದೆ, ತನ್ನ ತಮ್ಮಂದಿರೇ ತನ್ನ ಪ್ರಭುತ್ವವನ್ನು ಒಪ್ಪದ ಕಾರಣ, ಚಕ್ರರತ್ನವು ಪುರದ್ವಾರದಲ್ಲಿ ನಿಂತುಬಿಡುತ್ತದೆ. ಇದು ಆತನಿಗೊದಗಿದ ಎರಡನೆಯ ಆಘಾತ. ತನ್ನ ತಮ್ಮಂದಿರು ತನ್ನ ಪ್ರಭುತ್ವವನ್ನು ಒಪ್ಪಿ ಶರಣಾಗಲು ವಿಧಿಸುತ್ತಾನೆ. ಹಿರಿಯಣ್ಣನ ಉದ್ಧಟತನಕ್ಕೆ ಹೇಸಿ, ಅವರು ಪ್ರತಿಭಟಿಸುತ್ತಾರೆ. ಬಾಹುಬಲಿಯೊಬ್ಬನನ್ನುಳಿದು ಎಲ್ಲ ತಮ್ಮಂದಿರೂ ರಾಜ್ಯ ತ್ಯಾಗ ಮಾಡಿ ತಪೋನಿರತರಾಗುತ್ತಾರೆ. ಆದರೆ ಭರತ-ಬಾಹುಬಲಿಗಳ ನಡುವೆ ವಾದ-ಪ್ರತಿವಾದ ನಡೆದು, ಕೊನೆಗೆ ಧರ್ಮಯುದ್ಧವೇ ಘಟಿಸುತ್ತದೆ. ದೃಷ್ಟಿ, ಜಲ, ಮಲ್ಲ ಯುದ್ಧಗಳು ನಡೆದು ಮೂರರಲ್ಲೂ ಬಾಹುಬಲಿ ಗೆಲ್ಲುತ್ತಾನೆ. ಅಣ್ಣನನ್ನು ಬಾಹುಗಳಿಂದ ಎತ್ತಿ ಹಿಡಿದು ನೆಲಕ್ಕೆ ಅಪ್ಪಳಿಸದೆ, ಕರುಣೆಯಿಂದ ಕೆಳಗಿಳಿಸುವ ಔದಾರ್ಯ ತೋರುತ್ತಾನೆ. ತನ್ನ ಸೋಲಿನಿಂದ ಅಪಮಾನಿತನಾದ ಭರತ ತನ್ನ ಚಕ್ರರತ್ನಕ್ಕೆ ತಮ್ಮನನ್ನು ಕೊಲ್ಲಲು ಆಜ್ಞಾಪಿಸುತ್ತಾನೆ. ಆದರೆ ಅದು ಆತನ ಮಾತನ್ನು ಕೇಳದೆ ಬಾಹುಬಲಿಗೆ ಗೌರವದಿಂದ

ಪ್ರದಕ್ಷಿಣೆ ಹಾಕಿ, ಆತನ ಬಲ ಭುಜದ ಬಳಿ ತೆಪ್ಪಗೆ ನಿಲ್ಲುತ್ತದೆ. ಅಣ್ಣನ ಈ ಹೇಯ ಕಾರ್ಯದಿಂದ ಬಾಹುಬಲಿಗೆ ವೈರಾಗ್ಯ ಹುಟ್ಟುತ್ತದೆ. 'ರಾಜ್ಯ ಮೋಹವು ಅಣ್ಣ-ತಮ್ಮದಿರನ್ನು ಕದನಕ್ಕಿಳಿಸುತ್ತದೆ. ತಂದೆ-ಮಕ್ಕಳ ನಡುವೆ ದ್ವೇಷ ಹುಟ್ಟಿಸುತ್ತದೆ. ಇಂಥ ರಾಜ್ಯಲಕ್ಷ್ಮಿ ನಿನಗೇ ಇರಲಿ' ಎನ್ನುತ್ತಾನೆ. ಇಷ್ಟಲ್ಲದೆ, 'ಅರಿಯದೆ ಅಣ್ಣನಾದ ನಿನ್ನೊಡನೆ ಅವಿನಯದಿಂದ ವರ್ತಿಸಿದೆ ; ಈ ದೋಷವನ್ನು ತಪವನ್ನಾಚರಿಸಿ ಕಳೆದುಕೊಳ್ಳುವೆ' ಎಂದು ಪಶ್ಚಾತ್ತಾಪ ಪಡುತ್ತಾನೆ. ಇತ್ತ ಭರತನೂ ಕೂಡ ತಮ್ಮನ ಮಹಿಮಾತಿಶಯವನ್ನು ಮೆಚ್ಚಿ ಪಶ್ಚಾತ್ತಾಪದಿಂದ ತಮ್ಮನ ಪಾದಕ್ಕೆರಗುತ್ತಾನೆ. ತನ್ನ ಕಣ್ಣೀರಿಂದ ಆತನ ಪಾದಗಳನ್ನು ತೊಳೆಯುತ್ತಿದ್ದಾಗ, ಬಾಹುಬಲಿಯೂ ಅಣ್ಣನ ಮಸ್ತಕದ ಮೇಲೆ ತನ್ನ ಕಣ್ಣೀರಿಂದ ರಾಜ್ಯಾಭಿಷೇಕ ಮಾಡಿದನೆಂದು ಪಂಪ ಕವಿ ಬಣ್ಣಿಸಿದ್ದಾನೆ !.

ಬಾಹುಬಲಿ ಪ್ರತಿಮಾ ಯೋಗದಲ್ಲಿ ನಿಂತು ಘೋರ ತಪಸ್ಸನ್ನಾಚರಿಸಿದರೂ ಕೇವಲ ಜ್ಞಾನೋತ್ಪತ್ತಿ -ಯಾಗುವುದಿಲ್ಲ. ಭರತನು ತ್ರಸ್ತನಾಗಿ, ತಂದೆಯಲ್ಲಿಗೆ ಹೋಗಿ ಇದರ ಕಾರಣವನ್ನು ತಿಳಿದುಕೊಳ್ಳುತ್ತಾನೆ. ''ತಪದಲ್ಲಿದ್ದರೂ ಅಣ್ಣನ ನೆಲದಲ್ಲಿ ನಿಂತಿದ್ದೇನೆಂಬ ಮಾನಕಷಾಯವಿನ್ನೂ ಅವನಲ್ಲಿದೆ, ನೀನು ಹೋಗಿ ಆತನ ಪಾದಕ್ಕೆರಗಿ ಪೂಜಿಸು'' ಎಂದು ವೃಷಭದೇವನ ಆದೇಶವಾಗುತ್ತದೆ. ಹಾಗೆ ತಮ್ಮನ ಕಾಲ್ಗೆರಗಿ ಪೂಜಿಸುತ್ತ ,- 'ಮನೋನ್ನತನೇ, ಈ ಭೂಮಿ ನಿನ್ನದೆ. ನೀನು ಕೊಟ್ಟುದರಿಂದ ನನ್ನದಾಗಿದೆ. ಅನ್ಯಥಾ ಭಾವಿಸದಿರು' ಎಂದು ಪ್ರಾರ್ಥಿಸಿಕೊಳ್ಳುತ್ತಾನೆ. ಆಗ ಆತನಿಗೆ ಕೇವಲ ಜ್ಞಾನ ಪ್ರಾಪ್ತಿಯಾಗುತ್ತದೆ. ಬಾಹುಬಲಿ ಗೊಮ್ಮಟೇಶ್ವರನ ಚಾರಿತ್ರ್ಯ ಮಹೋನ್ನತ, ಪರಮ ಪಾವನಯುತ !.

# ಪುರಂದರದಾಸರ ಸಾಮಾಜಿಕ ಪ್ರಜ್ಞೆ

**ಎಸ್.ಆರ್.ಮಳಗಿ**

ಪುರಂದರದಾಸರ ಕೀರ್ತನೆಗಳಲ್ಲಿ ಅವರ ಸಾಮಾಜಿಕ ಪ್ರಜ್ಞೆ ವಿಪುಲವಾಗಿ ರಂಗುರಂಗಾಗಿ ಮೂಡಿದೆ. ದಾಸರು ಅಂತರ್ಮುಖಿಗಳಷ್ಟೇ ಅಲ್ಲ, ಅವರು ಬಹಿರ್ಮುಖಿಗಳೂ ಆಗಿ ಸಮಾಜ ಜೀವನದಲ್ಲಿ ಒಂದಾಗಿ ಪಾಲುಗೊಂಡವರು. ಸಂಸಾರದಲ್ಲಿದ್ದೂ ಇಲ್ಲದವರಂತೆ, ಸಮಾಜದ ಗೊಂದಣದಲ್ಲಿ ಸಿಲುಕಿಯೂ ಸಿಲುಕದವರಂತೆ ಅವರ ಜೀವನ ಲೀಲೆ ! ತಾವೊಬ್ಬರೇ ಭಕ್ತಿ ಮಾರ್ಗದಿಂದ ವೈಯಕ್ತಿಕ ಮುಕ್ತಿ ಪಡೆಯುವುದು ಅವರ ಗುರಿಯಾಗಿರಲಿಲ್ಲ ; ತಮ್ಮೊಂದಿಗೆ ತಮ್ಮ ಸುತ್ತಣ ಸಮಾಜವನ್ನು ಉದ್ಧರಿಸುವ ಮಣಿಹವನ್ನೂ ಹೊತ್ತವರವರು. ಸಮಾಜದ ಕುಂದು-ಕೊರತೆಗಳನ್ನೂ ವೈಯಕ್ತಿಕ ಲೋಪ-ದೋಷಗಳನ್ನೂ ತಿದ್ದುವುದು ತಮ್ಮ ಧರ್ಮ, ಕರ್ತವ್ಯಕರ್ಮ ಎಂದು ಅವರು ಭಾವಿಸಿದ್ದರು. ಈ ಮೊದಲು ವೀರಶೈವ ವಚನಕಾರರೂ ಇದೇ ಬಗೆಯ ಕಾರ್ಯದಲ್ಲಿ ಪ್ರಗತಿಯನ್ನು ಸಾಧಿಸಿ ತೋರಿಸಿದ್ದರು. ವಚನಗಳಲ್ಲಿಲ್ಲದ ಮಧುರ ಸಂಗೀತ-ನೃತ್ಯಗಳ ಸೊಗಸನ್ನು ಸೂಸುವ ದಾಸರ ಕೀರ್ತನೆಗಳು ವಿಶೇಷ ರೀತಿಯ ಫಲ ಕೊಟ್ಟವು, ಇನ್ನೂ ಕೊಡುತ್ತಲಿವೆ. ಸಂಸಾರದಲ್ಲಿ ಮುಳುಗಿ ದೇವರು, ಧರ್ಮ ಇತ್ಯಾದಿಗಳ ಬಗ್ಗೆ ಅಸಡ್ಡೆಯಿಂದಿರುವ ಮೂಢ ಜನಕ್ಕೆ ಆಸ್ತಿಕತೆಯನ್ನೂ, ಶ್ರದ್ಧೆ-ನಿಷ್ಠೆಗಳನ್ನೂ ಬೋಧಿಸಿದರು. ದಾಸರದು ಬರಿ ಬೋಧನೆಯಾಗಿರಲಿಲ್ಲ, ತಾವೂ ಆಚರಿಸಿ ಬೋಧಿಸಿದರು. ವಚನಕಾರರು ತೋರಿದ ದಾರಿಯೂ ಇದೇ ಆಗಿತ್ತು. ಸ್ವಂತದ ಆಚರಣೆಯಿಲ್ಲದ ಬೋಧೆ ಟೊಳ್ಳು ಬೋಧೆ. ಅದರ ಪರಿಣಾಮ ತದ್ವಿರುದ್ಧವಾಗುವುದುಂಟು. ಧರ್ಮ ಬೋಧೆ ನೀತಿ ಬೋಧೆಗಳಿಗೆ ಅರ್ಹತೆ ಇರಬೇಕು. ಅಂಥ ಅರ್ಹತೆ-ಅಧಿಕಾರಗಳಿಂದ ದಾಸರೂ ವಚನಕಾರರೂ ಸಂಪನ್ನರಾಗಿದ್ದರು. 'ಧರ್ಮವೇ ಜಯವೆಂಬ ದಿವ್ಯ ಮಂತ್ರ' ಎಂಬ ಪುರಂದರದಾಸರ ಕೀರ್ತನೆ ಧರ್ಮ ಬೋಧೆಯಲ್ಲಿ ನಿಸ್ಸೀಮವೆನಿಸಿದೆ. ಅದೊಂದು ಅಸಾಧಾರಣ ದೃಷ್ಟಿ. ಆತ್ಮಸಾಕ್ಷಾತ್ಕಾರವಾಗದವರಿಗೆ ಇಂಥ ದೃಷ್ಟಿ ಬಾರದು. ನಮ್ಮ ಸಮಾಜ ಹಿಂದೆಯೂ ಇಂದಿನಂತೆಯೇ ಇತ್ತು. ನಾಯಿಯ ಬಾಲ ಡೊಂಕೆ ಎನ್ನುವ ರೀತಿ ಅದರದು. ಎಷ್ಟು ಜನ ಮಹಾತ್ಮರು, ಸಂತರು, ವಿಭೂತಿ ಪುರುಷರು, ಅವತಾರಿಗಳು ಧರ್ಮ ಬೋಧೆ ಮಾಡಿದ್ದರೂ ನಮ್ಮ ಸಮಾಜ ಬುದ್ಧಿ ಕಲಿತಂತೆ ಕಾಣುವುದಿಲ್ಲ. ಇದೇನಿದ್ದರೂ ಪುರಂದರದಾಸರಂತಹ ಸಂತರು ಆತ್ಮಸಾಕ್ಷಿಯಾಗಿ ಮಾಡಬೇಕಾದ ಧರ್ಮಬೋಧೆ ಮಾಡಿದ್ದಾರೆ. ಈ ಕೀರ್ತನೆಯನ್ನು ಕೇಳಿರಿ, ಅದು ಚಿಂತನ ಯೋಗ್ಯವಾಗಿದೆ :

ಧರ್ಮವೇ ಜಯವೆಂಬ ದಿವ್ಯ ಮಂತ್ರ ॥ಪ॥
ಮರ್ಮವನರಿತು ಮಾಡಲು ಬೇಕು ತಂತ್ರ ॥ಅ.ಪ॥

1

ವಿಷವಿಕ್ಕಿದವಗೆ ಷಡ್ರಸವನುಣಿಸಲು ಬೇಕು ।

ದ್ವೇಷ ಮಾಡಿದವನ ಪೋಷಿಸಲು ಬೇಕು ॥

ಪುಸಿಮಾಡಿ ಕೆಡಿಸುವನ ಹಾಡಿ ಹರಸಲು ಬೇಕು ।
ಮೋಸ ಮಾಡುವನ ಹೆಸರ ಮಗನಿಗಿಡಬೇಕು ॥

2

ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು ।

ಬಂಧನದೊಳಿಟ್ಟವರ ಬೆರೆಯಬೇಕು ॥

ಕೊಂದ ವೈರಿಯ ಮನೆಗೆ ನಡೆದು ಹೋಗಲು ಬೇಕು ।
ಕುಂದೆಣಿಸುವವರ ಗೆಳೆತನ ಮಾಡಬೇಕು ॥

3

ಕೊಂಡೊಯ್ದು ಬಡಿದವರ ಕೊಂಡಾಡುತಿರಬೇಕು ।

ಕಂಡು ಸಹಿಸದವರನು ಕರೆಯಬೇಕು ॥

ಪುಂಡರೀಕಾಕ್ಷ ಶ್ರೀ ಪುರಂದರ ವಿಠಲನ ।

ಕೊಂಡಾಡಿ ತಾ ಧನ್ಯನಾಗಬೇಕು ॥

ಈ ಕೀರ್ತನೆಯ ಧರ್ಮ ಸಂದೇಶ ವಿಶ್ವ ಧರ್ಮ ಸಂದೇಶ. ಹಿಂದೆ ಬುದ್ಧ, ಮಹಾವೀರ, ಯೇಸು ಕ್ರಿಸ್ತರೂ ಮೊನ್ನೆ ಮೊನ್ನೆ ಆಗಿ ಹೋದ ಮಹಾತ್ಮ ಗಾಂಧಿಯವರೂ ಇಂಥ ಅಹಿಂಸಾ ಧರ್ಮದ ಬೋಧೆ ಮಾಡಿ ಹೋಗಿದ್ದಾರೆ. ಇದೇ ನಿಲುವಿನಲ್ಲಿ ನಿಂತು ಪುರಂದರದಾಸರೂ ವಿಶ್ವ ಧರ್ಮ ಸಂದೇಶ ನೀಡಿದ್ದಾರಲ್ಲವೆ ? ಆದರೆ ಇಂಥ ಬೋಧೆಗೆ ಕಿವಿಗೊಡುವ ಜಗತ್ತು ಇನ್ನೂ ಹುಟ್ಟಿ ಬರಬೇಕಾಗಿದೆ !

**19/07/1989**

# ಶ್ರೀ ರಾಮಕೃಷ್ಣ ಪರಮಹಂಸರ ದೃಷ್ಟಾಂತ ಕಥೆಗಳು

ಎಸ್.ಆರ್. ಮಳಗಿ

ಶ್ರೀ ರಾಮಕೃಷ್ಣ ಪರಮಹಂಸರು ಜೀವನದ ನಾನಾ ಬಗೆಯ ಸಮಸ್ಯೆಗಳಿಗೆ ಪರಿಹಾರ ನೀಡುವಲ್ಲಿ , ಥಟ್ಟನೆ ಹೊಳೆಯುವ ದೃಷ್ಟಾಂತಗಳನ್ನು ವಿವರಿಸುತ್ತಿದ್ದರು. ದೃಷ್ಟಾಂತ ರೂಪದ ಈ ಕಥೆಗಳು ಚುಟುಕಾಗಿದ್ದರೂ ಸತ್ಯದ ಹಲವು ಮುಖಗಳನ್ನು ತೆರೆದು ತೋರಿಸುತ್ತ ಪಂಡಿತ-ಪಾಮರರೆಲ್ಲರನ್ನೂ ತಲೆದೂಗಿಸುತ್ತಿದ್ದವು. ಅಧ್ಯಾತ್ಮ ಸಂಸ್ಕೃತಿಯನ್ನು ಹೀಗಳೆಯುವ ಇಂದಿನ ನವನಾಗರಿಕ ತರುಣರನ್ನೂ ಕೂಡ ಈ ದೃಷ್ಟಾಂತ ಕಥೆಗಳು ಮನವೊಲಿಸುವಂತಿವೆ.

ನಮ್ಮ ಪ್ರಾಚೀನ ಪುರಾಣ ಕಾವ್ಯಗಳಲ್ಲಿ ಋಷಿಗಳು, ವಿರಕ್ತ ಸನ್ಯಾಸಿ ಹಾಗೂ ಯೋಗಿಗಳು, ಹಲ ಬಗೆಯ ರಾಕ್ಷಸರೂ ಕೂಡ ಕಠೋರ ತಪಸ್ಸನ್ನಾಚರಿಸುತ್ತಿದ್ದ ಆಖ್ಯಾನಗಳು ನೂರಾರಿವೆ. ಇವರೆಲ್ಲರು ತಮ್ಮ ತಪಸ್ಸಿನಿಂದ ಭಗವಂತನನ್ನು ಮೆಚ್ಚಿಸಿ ತಮಗೆ ಇಷ್ಟವಾದ ವರಗಳನ್ನು ಪಡೆಯುತ್ತಿದ್ದುದು ಎಲ್ಲರೂ ಬಲ್ಲ ವಿಷಯ. ಹಾಗೆಯೆ, ಪರಮಾತ್ಮನ ಸಾಕ್ಷಾತ್ಕಾರ ಹೊಂದಲು ಭಕ್ತಿ ಮಾರ್ಗವನ್ನು ಅನುಸರಿಸುವವರನ್ನು ಕುರಿತೂ ನಾವು ಕೇಳುತ್ತಿರುತ್ತೇವೆ. ವಿರಕ್ತ ಯೋಗಿ-ಸನ್ಯಾಸಿಗಳ ಘೋರ ತಪೋಮಾರ್ಗ ಮತ್ತು ದಾಸರು, ಸಾಧು-ಸಂತರು, ಶರಣರು ಕೈಕೊಳ್ಳುವ ಸುಲಭ ಹಾಗೂ ಹಿತಕಾರಿಯಾದ ಭಕ್ತಿ ಮಾರ್ಗ-ಇವುಗಳಲ್ಲಿ ಜೀವನಕ್ಕೆ ಹೆಚ್ಚು ಪ್ರಯೋಜನಕಾರಿಯಾದುದು ಯಾವುದು? ಈ ಪ್ರಶ್ನೆಯನ್ನು ಒಬ್ಬ ಶಿಷ್ಯನು ಒಮ್ಮೆ ಶ್ರೀ ರಾಮಕೃಷ್ಣರ ಮುಂದೆ ಇಟ್ಟಾಗ, ಅವರು ಪುರಾಣ ಪ್ರಸಿದ್ಧ ಭಕ್ತಾಗ್ರೇಸರ ನಾರದ ಮಹರ್ಷಿಗಳ ಕಥೆಯೊಂದನ್ನು ಹೇಳಿದರು. ಅದು ಹೀಗಿದೆ :-

ಒಮ್ಮೆ ತ್ರಿಲೋಕ ಸಂಚಾರಿ ನಾರದ ಮಹರ್ಷಿಗಳು ತಮ್ಮ ಭೂಸಂಚಾರವನ್ನು ಮುಗಿಸಿಕೊಂಡು, ವೈಕುಂಠಕ್ಕೆ ಮರಳಿ ಹೋಗುವ ಮಾರ್ಗದಲ್ಲಿದ್ದರು. ಆಗ ಒಬ್ಬ ವಿರಕ್ತ ಯೋಗಿಯನ್ನು ಕಂಡರು. ಆ ಯೋಗಿ ಒಂದು ಬೆಟ್ಟದ ಮೇಲಿದ್ದುಕೊಂಡು ಘೋರ ತಪಸ್ಸನ್ನಾಚರಿಸುತ್ತಿದ್ದ. ನಾರದರ ನಾರಾಯಣ ನಾಮ ಸ್ಮರಣೆಯ ನಾದವು ಕಿವಿಯನ್ನು ತಟ್ಟಿದಾಗ, ಎಚ್ಚತ್ತ ಆ ಯೋಗಿ, - 'ಓ ನಾರದ ಮಹರ್ಷಿಗಳೇ' ಎಂದು ಕೂಗಿ ಕರೆದು ಅವರನ್ನು ಪ್ರಶ್ನಿಸಿದ. 'ಸ್ವಾಮೀ, ನಾರದರೇ, ತಾವೀಗ ವೈಕುಂಠಕ್ಕೆ ಹೋಗುತ್ತೀರಿ, ಭಗವಂತ ವಿಷ್ಣುವನ್ನು ಕಾಣುತ್ತೀರಿ, ಅಲ್ಲವೇ? ತಮಗೂ ಆ ಪರಮಾತ್ಮನಿಗೂ ತುಂಬ ಸಲುಗೆ ಎಂಬುದು ನನಗೆ ಗೊತ್ತು. ನನ್ನದೊಂದು ಬಿನ್ನಹವನ್ನು ಆತನ ಮುಂದೆ ಮಂಡಿಸುತ್ತೀರಾ?' ಎಂದು ಬೇಡಿಕೊಂಡ. 'ಏನದು, ಪರಮಾತ್ಮನ ಮುಂದೆ ಮಂಡಿಸುವಂಥಾದ್ದು?' ಎಂದು ನಾರದರು ಆಶ್ಚರ್ಯಚಕಿತರಾದಂತೆ ಕೇಳಿದರು. ಆಗ ಆ ತಪಸ್ವಿ ಹೀಗೆ ಗೋಗರೆದ : ಸ್ವಾಮೀ, ನಾನು ಜೀವನದುದ್ದಕ್ಕೂ ಕಠೋರ ತಪವನ್ನಾಚರಿಸುತ್ತಿದ್ದೇನೆ. ತನು - ಮನ - ಪ್ರಾಣಗಳನ್ನು ದಂಡಿಸುತ್ತಿದ್ದೇನೆ. ಇಷ್ಟೆಲ್ಲ ಮಾಡಿದರೂ ನನಗೆ ಆ ವಿಷ್ಣುವಿನ ಸಾಕ್ಷಾತ್ಕಾರವಾಗಿಲ್ಲ. ಇನ್ನೂ ಏನು ಮಾಡಬೇಕೋ ನನಗೆ ತಿಳಿಯದಾಗಿದೆ. ಆ ಭಗವಂತನ ದರ್ಶನ ಹಾಗೂ ಸಾನ್ನಿಧ್ಯ ಭಾಗ್ಯ ನನಗೆ ಯಾವಾಗ ಲಭ್ಯ ? ದಯಮಾಡಿ ನನ್ನ ಪರವಾಗಿ ಆತನನ್ನು ಕೇಳಿ ತಿಳಿಸುವಿರಾ? ಎಂದ. ನಾರದರು ಆ ತಪಸ್ವಿಯ ಬೆನ್ನ

ಮೇಲೆ ಕೈಯಾಡಿಸಿ, ಸಮಾಧಾನಪಡಿಸಿ, ವಿಷ್ಣುವನ್ನು ಈ ಬಗ್ಗೆ ಕೇಳಿ ತಿಳಿಸುವುದಾಗಿ ಆಶ್ವಾಸನವಿತ್ತು ಮುನ್ನಡೆದರು.

ಅನಂತರ ಇನ್ನೊಂದೆಡೆಯಲ್ಲಿ ಒಬ್ಬ ವೈಷ್ಣವ ಭಕ್ತನನ್ನು ಅವರು ಕಂಡರು. ಆತ ಹರಿಭಜನೆ ಮಾಡುತ್ತ ತನ್ಮಯತೆಯಿಂದ ಹಾಡುತ್ತ, ಕುಣಿಯುತ್ತ ಇದ್ದ. ಆತನೂ ಹತ್ತಿರದಲ್ಲಿಯೆ ನಾರದರು ಹೋಗುತ್ತಿದ್ದುದನ್ನು ಕಂಡು, - 'ನಾರದ ಮಹರ್ಷಿಗಳೇ' ಎಂದು ಕೂಗಿ ಕರೆದು 'ಸ್ವಾಮೀ ನಾನು ಸದಾ ನಿಮ್ಮ ಹಾಗೆಯೆ ಶ್ರೀ ಹರಿಯ ಭಜನೆಯಲ್ಲಿ ಕಾಲ ಕಳೆಯುತ್ತಿದ್ದೇನೆ. ನನಗಿನ್ನೂ ನನ್ನ ಪ್ರಭು ಶ್ರೀಹರಿಯ ದರ್ಶನವಾಗಿಲ್ಲ. ನೀವು ಹೇಗೂ ವೈಕುಂಠಕ್ಕೆ ಹೋಗುತ್ತೀರಲ್ಲವೆ ? ನನ್ನ ಪ್ರಭು ಶ್ರೀಹರಿಯನ್ನು ಕಾಣುವಿರಷ್ಟೆ ? ಆತನ ಮುಖ ದರ್ಶನ ನನಗೆ ಯಾವಾಗ ಲಭ್ಯ ? ದಯವಿಟ್ಟು ನನ್ನ ಪರವಾಗಿ ಆತನನ್ನು ಕೇಳಿ ತಿಳಿಸುವಿರಾ, ಸ್ವಾಮೀ ?' ಎಂದು ಕೇಳಿಕೊಂಡ. ನಾರದರು ಯಥಾ ಪ್ರಕಾರ, ಆ ಭಕ್ತನ ಬೆನ್ನ ಮೇಲೆ ಕೈಯಾಡಿಸಿ ಸಮಾಧಾನಪಡಿಸುತ್ತ, - ಒಳ್ಳೆಯದು ಶ್ರೀಹರಿಯನ್ನು ಕೇಳಿ ತಿಳಿಸುವೆ ಎಂದು ಆಶ್ವಾಸನವಿತ್ತು ಮುಂದೆ ನಡೆದರು.

ನಾರದರು ವೈಕುಂಠದಿಂದ ಮರಳಿ ಹೊರಟು ಭೂ ಲೋಕಕ್ಕೆ ಬಂದಾಗ, ಮೊದಲು ಆ ವಿರಕ್ತ ಯೋಗಿಯನ್ನು ಭೇಟಿಯಾಗಿ ಹೀಗೆ ಹೇಳಿದರು. 'ತಪಸ್ವಿಗಳೇ, ವಿಷ್ಣು ಪರಮಾತ್ಮನನ್ನು ಕೇಳಿದೆ, ನಿಮಗೆ ಆತನ ಸಾಕ್ಷಾತ್ಕಾರವಾಗುವುದಕ್ಕೆ, ನೀವು ಇನ್ನೂ ಆರು ಜನ್ಮಗಳನ್ನು ಕಳೆಯಬೇಕು' ಎಂದರು. ಆಗ ಆ ತಪಸ್ವಿ 'ಅಯ್ಯೋ, ಅಯ್ಯೋ' ಎಂದು ಗೋಳಾಡುತ್ತಾ, 'ಏನು? ಇನ್ನೂ ಆರು ಜನ್ಮ ಕಳೆಯಬೇಕೆ? ಇಂಥ ಘನಘೋರ ತಪಸ್ಸು, ಇಂಥ ದೈತ್ಯ ಸಾಹಸ ಮಾಡುತ್ತ ಇನ್ನೂ ಆರು ಜನ್ಮ ಕಳೆಯಬೇಕೆ ? ಆ ಭಗವಂತ ನನ್ನ ಮೇಲೆ ಇಷ್ಟು ಕಠೋರನಾದನೆ ? ಕರುಣಾಹೀನನಾದನೆ ? ಅಯ್ಯೋ, ಅಯ್ಯೋ, ಎಂದು ಗೋಗರೆಯತೊಡಗಿದ.

ಅನಂತರ ನಾರದರು ಆ ವೈಷ್ಣವ ಭಕ್ತನನ್ನು ಭೆಟ್ಟಿಯಾಗಿ ಹೇಳಿದರು, - 'ಹರಿಭಕ್ತರೇ, ನಿಮ್ಮ ಬಗ್ಗೆ ಶ್ರೀ ಹರಿಯನ್ನು ಕೇಳಿ ತಿಳಿದುಕೊಂಡೆ. ಆದರೆ ಆತನಿಂದ ತಂದ ಸುದ್ದಿ ನಿಮಗೆ ಅಷ್ಟೇನು ಒಳ್ಳೆಯದೆನಿಸಲಿಕ್ಕಿಲ್ಲ. ಆದರೂ ನಾನು ಹೇಳಲೇಬೇಕು. ಆ ನಿಮ್ಮ ಪ್ರಭು ಶ್ರೀ ಹರಿಯನ್ನು ನೀವು ಕಾಣುವಿರಿ. ಆದರೆ ಇನ್ನೂ ಒಂದು ಲಕ್ಷ ಜನ್ಮಗಳನ್ನು ಕಳೆದ ಮೇಲೆ ಮಾತ್ರ'. ನಾರದರ ಮಾತು ಮುಗಿಯುವ ಮುನ್ನವೆ, ಆ ಭಕ್ತ ಪರಮಾನಂದಭರಿತನಾಗಿ, ಉದ್ರೇಕಗೊಂಡು ನೆಗೆದಾಡುತ್ತಾ, ಕುಣಿದಾಡುತ್ತ, ಅಬ್ಬಾ! ನನ್ನ ಪ್ರಭು ಶ್ರೀ ಹರಿಯನ್ನು ನಾನು ಕಂಡೇ ಕಾಣುವೆ! ಒಂದು ಲಕ್ಷ ಜನ್ಮಗಳಾದರೇನು? ಆ ಮೇಲಾದರೂ ಆತನ ದರ್ಶನ ಆಗಿಯೇ ತೀರುವುದಲ್ಲವೆ? ನಾನೆಷ್ಟು ಭಾಗ್ಯವಂತ!. ಶ್ರೀ ಹರಿಯ ಅನುಗ್ರಹ ಅದೆಷ್ಟು ಘನವಾದುದು!. ನನ್ನ ಪ್ರಭು ನಿಜವಾಗಿಯೂ ದಯಾ ಘನ! ದಯಾ ಘನ!' ಎಂದು ಹರ್ಷೋದ್ರೇಕದಿಂದ ಶ್ರೀ ಹರಿಯನ್ನು ಕೊಂಡಾಡುತ್ತ, ಆನಂದಾಶ್ರುಗಳನ್ನು ಸುರಿಸುತ್ತ, ಕುಣಿದಾಡುತ್ತ ಮೈಮರೆತು ಹೋದ ! ಇಂಥ ಭಕ್ತನನ್ನು ಕಣ್ಣಾರೆ ಕಂಡ ನಾರದರು, ಆ ಭಕ್ತನ ಆವೇಶವನ್ನು ತಡೆದು ನಿಲ್ಲಿಸಿ, 'ಭಕ್ತನೇ, ನಿನಗೆ ಶ್ರೀ ಹರಿಯ ಸಾಕ್ಷಾತ್ಕಾರವಾಗಿದೆ ! ಇಂದೇ, ಈಗಲೇ ನಿನ್ನ ಪ್ರಭುವಿನ ದರ್ಶನ ನಿನಗಾಗುವುದು !' ಎಂದು ಉದ್ಗರಿಸಿದರು. ಶ್ರೀ ರಾಮಕೃಷ್ಣರ ಈ ದೃಷ್ಟಾಂತದ ಇಂಗಿತ ಯಾರ ಹೃದಯ ತಟ್ಟದು?

# ಶ್ರೀ ರಾಮಕೃಷ್ಣ ಪರಮಹಂಸರ ನಿತ್ಯ ಪ್ರಸ್ತುತತೆ

ಎಸ್.ಆರ್.ಮಳಗಿ

ಶ್ರೀ ರಾಮಕೃಷ್ಣ ಪರಮಹಂಸರ ಶಿಷ್ಯೋತ್ತಮ,- ಸ್ವಾಮಿ ವಿವೇಕಾನಂದರು ಅವರನ್ನು ಕುರಿತು ಹೀಗೆ ಉದ್ಗರಿಸಿದ್ದಾರೆ :- "ಶ್ರೀ ರಾಮಕೃಷ್ಣರು ಅವತಾರ ಪುರುಷರು. ವೇದಗಳ ಹಾಗೂ ಅವುಗಳ ಗುರಿಯ ಜೀವಂತ ಭಾಷ್ಯವೇ ಆಗಿದ್ದರು. ತಮ್ಮ ಒಂದು ಜೀವನದಲ್ಲಿ ಭಾರತದ ರಾಷ್ಟ್ರೀಯ ಧಾರ್ಮಿಕತೆಯ ಅಸ್ತಿತ್ವದ, ಇಡಿಯ ಒಂದು ಯುಗಮಾನದ ಸತ್ವಸಾರವನ್ನು ಮೈಗೂಡಿಸಿಕೊಂಡು, ಅದನ್ನು ಕಾರ್ಯ ರೂಪದಲ್ಲಿ ಪ್ರದರ್ಶಿಸಿದರು".

ಈ ಉಕ್ತಿಯಲ್ಲಿ ಮೂರು ಮುಖ್ಯಾಂಶಗಳು ಧ್ವನಿತವಾಗುತ್ತವೆ : ಒಂದನೆಯದು,- ಭಗವಂತನೇ ಧರೆಗಿಳಿದು ಬಂದು ಶ್ರೀ ರಾಮಕೃಷ್ಣರ ರೂಪದಲ್ಲಿ ತನ್ನ ಅವತಾರ ಕಾರ್ಯವೆಸಗಿದನು. ಎರಡನೆಯದು, - ಅವರು ಪ್ರಾಚೀನ ವೇದ ಸಂಸ್ಕೃತಿಯ ತಿರುಳನ್ನು ಸರಿಯಾಗಿ ಅರ್ಥೈಸಿ, ಪ್ರಚುರಪಡಿಸಿದರು. ಕೊನೆಯದಾಗಿ,- ಭಾರತದ ಒಂದು ಯುಗಮಾನದ ಎಂದರೆ ಕಳೆದ ಆರೇಳು ಸಹಸ್ರ ವರ್ಷಗಳ ಕಾಲದಿಂದ ಬೆಳೆಯುತ್ತ , ಮತ್ತು ಬೇರೆ ಬೇರೆ ಸ್ಥಿತ್ಯಂತರ ಹೊಂದುತ್ತ ಬಂದ, ಭಾರತದ ಧರ್ಮ ಸಂಸ್ಕೃತಿಯ ಪ್ರವಾಹವನ್ನು ಹೊಸ ದಿಕ್ಕಿಗೆ ಹೊರಳಿಸಿ ಮಹಾ ಕ್ರಾಂತಿಯೆಸಗಿದರು.

19ನೆಯ ಶತಮಾನದಲ್ಲಿ ಪಾಶ್ಚಾತ್ಯ ಧಾರ್ಮಿಕ ಹಾಗೂ ಸಾಮಾಜಿಕ ದಾಳಿಯ ಒತ್ತಡದಿಂದ ಭಾರತ ದೇಶವು ಅತ್ಯಂತ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ತೊಳಲಾಡುತ್ತಿತ್ತು. ಭಗವದ್ಗೀತೆಯ ಉಕ್ತಿಯಂತೆ, ಧರ್ಮಗ್ಲಾನಿ ಮತ್ತು ಅಧರ್ಮದ ಅಭ್ಯುತ್ಥಾನ - ಇವುಗಳಿಂದ ಎಲ್ಲೆಲ್ಲೂ ಕಗ್ಗತ್ತಲೆ ಮುಸುಕಿತ್ತು - ಇಂದಿನಂತೆಯೆ. ಇದನ್ನು ನಿವಾರಿಸಲು, ಪ್ರಖರವಾದ ಆಧ್ಯಾತ್ಮದ ಬೆಳಕನ್ನು ಹರಡುವ ಉದ್ದೇಶದಿಂದ ದೇವಮಾನವರಾದ ಶ್ರೀ ರಾಮಕೃಷ್ಣರು ಉದಯಿಸಿದರು. ತಮ್ಮ ಅವಸಾನ ಕಾಲದಲ್ಲಿ, ತಾವು ಶ್ರೀರಾಮ ಮತ್ತು ಶ್ರೀ ಕೃಷ್ಣರ ಸಮನ್ವಯ ಅವತಾರವೇ ಆಗಿದ್ದರೆಂದು ಸ್ವಾಮಿ ವಿವೇಕಾನಂದರಿಗೆ ಗುಟ್ಟಾಗಿ ಉಸಿರಿದ್ದರು.

ಶ್ರೀ ರಾಮನ ಅವತಾರವು ತ್ರೇತಾಯುಗಕ್ಕೆ ಅನುಗುಣವಾಗಿ ಕಾರ್ಯವೆಸಗಿದರೆ, ಶ್ರೀ ಕೃಷ್ಣಾವತಾರವು ಅನಂತರದ ದ್ವಾಪರ ಯುಗಕ್ಕೆ ಅನುಗುಣವಾಗಿತ್ತು. ಹಾಗೆಯೆ, ಇವೆರಡು ಅವತಾರಗಳ ಸಮನ್ವಯದ ಸಾಕಾರಮೂರ್ತಿಯಾಗಿದ್ದ ಶ್ರೀರಾಮಕೃಷ್ಣರ ಅವತಾರವು 19ನೇ ಶತಮಾನದ ಜಗತ್ತಿನ ಸ್ಥಿತಿ-ಗತಿಗಳ ಪರಿವರ್ತನೆಗೆ ಆವಶ್ಯಕವಾಗಿತ್ತು ಎಂದು ಹೇಳಬೇಕಾಗುತ್ತದೆ.

ಶ್ರೀ ರಾಮಕೃಷ್ಣರು ತಮ್ಮ ಅಂತರಾತ್ಮಕ್ಕೆ ಹೊಳೆದಂತೆ ನಿರ್ಭೀತಿಯಿಂದ ನುಡಿಯುತ್ತಿದ್ದರು, ನುಡಿದಂತೆ ನಡೆಯುತ್ತಿದ್ದರು. "ಭಗವಂತನನ್ನು ಮುಖಾಮುಖಿಯಾಗಿ ಕಂಡಿದ್ದೇನೆಂದು" ತಮ್ಮ ಶಿಷ್ಯ ವರ್ಗಕ್ಕೆ ಹೇಳುತ್ತಿದ್ದರು. ಅಲ್ಲದೆ, "ನೀವು ಇಷ್ಟಪಟ್ಟರೆ, ನಿಮಗೂ ಆತನನ್ನು ತೋರಿಸಬಲ್ಲೆ" ಎನ್ನುತ್ತಿದ್ದರು. ಅವರು ತಮ್ಮ ಮಾತಿನಿಂದ, ನಗೆ-ನಲಿವುಗಳಿಂದ, ಭಾವಾವೇಶಭರಿತರಾದಾಗ ಹೊರಸೂಸುತ್ತಿದ್ದ ಕಣ್ಣೀರಿನಿಂದ, ವಿಲಕ್ಷಣ

ವ್ಯಕ್ತಿತ್ವದ ವಿದ್ಯುತ್-ಸಂಸ್ಪರ್ಶದಿಂದ ಮತ್ತು ಸಂದರ್ಭವೊದಗಿದಾಗಲೆಲ್ಲ, ಥಟ್ಟನೆ ಭಾವ ಸಮಾಧಿಯಲ್ಲಿ ಮುಳುಗಿ ಪ್ರಕಟಪಡಿಸುತ್ತಿದ್ದ ಸ್ತಬ್ಧತೆಯಿಂದ, ಪ್ರತಿಯೊಂದರಲ್ಲೂ ಪ್ರತಿಯೊಬ್ಬರಲ್ಲೂ ಭಗವಂತನನ್ನು ವ್ಯಕ್ತಪಡಿಸುತ್ತಿದ್ದರು. ನಾಸ್ತಿಕರ ಹೃದಯವೂ ಭಗವಂತನಿಗಾಗಿ ತೆರೆದುಕೊಳ್ಳುವಂತೆ ಮಾಡುತ್ತಿದ್ದರು. ಪಾಪಿಗಳಿಗಾಗಿ ಅವರು ಮರುಗುತ್ತಿದ್ದರು. ಒಂದು ಕಠಿಣ ಶಬ್ದವನ್ನೂ ಅವರಿಗೆ ಆಡುತ್ತಿದ್ದಿಲ್ಲ. ಅವರು ಮಾಡಿದ ಪಾಪಗಳ ವಿಚಾರ ತಿಳಿದಾಗ, ಅವರನ್ನು ಮುಂದೆ ಕುಳ್ಳಿರಿಸಿಕೊಂಡು ತಾವೇ ಅಳುತ್ತಿದ್ದರು!. ಇದರಿಂದ ಪಾಪಿಗಳ ಪಾಪಗಳೆಲ್ಲ ತೊಳೆದು ಹೋಗುತ್ತಿದ್ದವು. ನೀತಿ ಭ್ರಷ್ಟರು, ದೇವರು-ಧರ್ಮಗಳನ್ನು ಹಳಿಯುವವರು ಹತ್ತಿರ ಬಂದಾಗ, ಅಗಾಧ ಪ್ರೀತಿ-ವಾತ್ಸಲ್ಯಗಳಿಂದ ಹೊಸ ಮನುಷ್ಯರನ್ನಾಗಿ ಮಾಡುತ್ತಿದ್ದರು. ಗಿರೀಶ್ ಘೋಷರೆಂಬ ಪ್ರಖ್ಯಾತ ಬಂಗಾಲಿ ನಾಟಕಕಾರರನ್ನು ಘೋರ ಅನಾಚಾರ-ದುರಭ್ಯಾಸಗಳಿಂದ ಮುಕ್ತಗೊಳಿಸಿ ದಾರಿಗೆ ಹಚ್ಚಿದ್ದು ಹೀಗೆಯೆ. ಪರಿವರ್ತನ ಹೊಂದಿದ ಮೇಲೆ, ಗಿರೀಶ್ ಘೋಷರು ಹೀಗೆ ನುಡಿದಿದ್ದಾರೆ : 'ನನ್ನನ್ನು ನಾನು ಪ್ರೀತಿ ಮಾಡುವುದಕ್ಕಿಂತ ಹೆಚ್ಚಾಗಿ ಶ್ರೀ ರಾಮಕೃಷ್ಣರು ನನ್ನನ್ನು ಪ್ರೀತಿಸಿದರು. ಗೆಳೆಯರೇ ಇಲ್ಲದ ನನಗೆ ಅವರು ಪರಮ ಸ್ನೇಹಿತರಾದರು; ಗುರುಗಳಾದರು, ನನ್ನ ತಪ್ಪುಗಳನ್ನು ಒಪ್ಪಾಗಿಸಿದರು. ದೇವರನ್ನು ನಂಬದ ನನ್ನಲ್ಲಿ ದೇವರ ಬಗ್ಗೆ ನಂಬುಗೆ ಹುಟ್ಟಿಸಿದರು, ಅವರೇ ನನ್ನ ದೇವರಾದರು!''- ಹೀಗೆ ಸಾವಿರಾರು ಜನರನ್ನು ಪರಿವರ್ತನಗೊಳಿಸಿ ತಮ್ಮ ಶಿಷ್ಯ ವರ್ಗಕ್ಕೆ ಸೇರಿಸಿಕೊಂಡರು - ಶ್ರೀ ರಾಮಕೃಷ್ಣರು. ಅವರ ಶಿಷ್ಯ ವರ್ಗದಲ್ಲಿ ಸಂಸಾರಿಗಳಿದ್ದರು, ಬ್ರಹ್ಮಚಾರಿಗಳಿದ್ದರು. ಸ್ತ್ರೀ ಪುರುಷರಿಬ್ಬರೂ ಇದ್ದರು. ಆ ಕಾಲದ ಬುದ್ಧಿಜೀವಿಗಳೆನಿಸಿದ್ದ ಸಮಾಜ ಸುಧಾರಕರು, ಸಾಹಿತ್ಯಜ್ಞರು, ಶಿಕ್ಷಣ ತಜ್ಞರು, ವಿಜ್ಞಾನಿಗಳು, ತತ್ವಜ್ಞಾನಿಗಳು, ಧರ್ಮ ಜಿಜ್ಞಾಸುಗಳು ಮುಂತಾದವರಲ್ಲದೆ, ಸನ್ಯಾಸಿಗಳು, ಯೋಗಿಗಳು, ಸಾಂಪ್ರದಾಯಿಕ ವಿವಿಧ ಮತಾನುಯಾಯಿಗಳು ಅವರ ದಿವ್ಯ ವ್ಯಕ್ತಿತ್ವದಿಂದ ಆಕರ್ಷಿತರಾದರು. ಅವರ ಸಂದರ್ಶನಕ್ಕಾಗಿ ಕಾದಿರುತ್ತಿದ್ದರು. ತಂತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುತ್ತಿದ್ದರು. ಓದು-ಬರೆ ಅರಿಯದ, ಕ್ರಮಬದ್ಧ ಶಿಕ್ಷಣ ಹೊಂದದ ಬಡ ಬ್ರಾಹ್ಮಣ ಮನೆತನದ ಶ್ರೀ ರಾಮಕೃಷ್ಣರಿಗೆ ಈ ಲೋಹ ಚುಂಬಕ ಆಕರ್ಷಕ ಶಕ್ತಿ ಬಂದುದು ಹೇಗೆ ? ತರ್ಕ ಬುದ್ಧಿ ತತ್ತರಿಸುತ್ತದೆ. ಅಂತೇ ಇಂಥವರನ್ನು ಭಾರತೀಯರು ಅವತಾರ ಪುರುಷರು ಎಂದರು.

ಅಂದಿನ ಭಾರತದ ಮತ-ಧರ್ಮಗಳ ವಿಚಾರವಾಗಿ ಶ್ರೀ ರಾಮಕೃಷ್ಣರ ಧೋರಣೆ ಏನಿತ್ತು ? ಇದನ್ನು ಮೊದಲು ವಿಚಾರಿಸುವ ಅಗತ್ಯವಿದೆ. ಯಾಕಂದರೆ, ಭಾರತದ ಸಂಸ್ಕೃತಿ ನಿಂತುದು ಮತ-ಧರ್ಮಗಳ ತಳಹದಿಯ ಮೇಲೆಯೆ. ಇದೊಂದು ಬಿಡಿಸಲಾರದ ಸಮಸ್ಯೆ, ಜಗತ್ತಿನ ಎಲ್ಲ ಧರ್ಮಗಳ ಗುರಿಯೊಂದೇ ಎಂಬುದನ್ನು ಮನವರಿಕೆ ಮಾಡಿಕೊಡುವಲ್ಲಿ ಅವರು ಹಿಡಿದ ದಾರಿ ವಿಲಕ್ಷಣವಾಗಿತ್ತು. ಹಿಂದೂ ಧರ್ಮದ ದ್ವೈತಾದ್ವೈತ, ವಿಶಿಷ್ಟಾದ್ವೈತ ಹಾಗೂ ತಂತ್ರ, ಶಾಸ್ತ್ರಗಳನ್ನು ಸ್ವತಃ ಆಂತರಿಕವಾಗಿ ಅನುಭವಿಸಿ, ಆಚರಿಸಿ ಬೋಧಿಸುತ್ತಿದ್ದರು. ಆಯಾ ಮತಗಳ ಜ್ಞಾನಿಗಳನ್ನು, ಪಂಡಿತರನ್ನು ಸ್ವತಃ ಕಂಡು ಇಲ್ಲವೆ ಬರಮಾಡಿಕೊಂಡು ಅವರ ವಿಚಾರಗಳನ್ನು ಸ್ವಾನುಭವದ ಒರೆಗಲ್ಲಿಗೆ ತಿಕ್ಕಿ ನೋಡುತ್ತಿದ್ದರು. ಅವರ ವಿವಿಧ ವಾದಗಳನ್ನು ಸಮಾಧಾನದಿಂದ ಕೇಳಿ, ಅವರ ಪ್ರಶ್ನೆಗಳಿಗೆ ಸಮರ್ಪಕ ಪರಿಹಾರ ನೀಡುತ್ತಿದ್ದರು. ಆಗಾಗ ಭಾವ ಸಮಾಧಿಯಲ್ಲಿ

ಮುಳುಗುತ್ತಿದ್ದ ಅವರಿಗೆ ಮನವರಿಕೆಯಾಗಿದ್ದ ಬ್ರಹ್ಮಜ್ಞಾನದಿಂದ, ಎಲ್ಲ ಧರ್ಮಗಳ ದೇವರುಗಳೂ 'ಕೇವಲ ಬ್ರಹ್ಮ'ನ ಪರ್ಯಾಯ ರೂಪಗಳೆ ಎಂದು ಮನಗಾಣಿಸಿಕೊಡುತ್ತಿದ್ದರು. 'ಪರಾತ್ಪರವಸ್ತು' ಮಾನವನ ನಾಲಗೆಗೆ ಎಟುಕದಂಥದೆಂದೂ ಹೇಳುತ್ತಿದ್ದರು. ಅವರ ಜ್ಞಾನವೆಲ್ಲವೂ ಆಂತರಿಕ ಅನುಭೂತಿಯೇ ಆಗಿತ್ತು. ಎಲ್ಲ ಧರ್ಮಗಳೂ ಆಯಾ ಮತಸ್ಥರನ್ನು ಬೇರೆ ಬೇರೆ ಪಥಗಳಲ್ಲಿ ನಡೆಸುತ್ತಿದ್ದರೂ ಅವೆಲ್ಲ ಕರೆದೊಯ್ಯುತ್ತಿರುವುದು ಪರಮ ಸತ್ಯದೆಡೆಗೇ ಎಂಬುದನ್ನು ಅನುಭವಿಸಿಯೇ ನುಡಿಯುತ್ತಿದ್ದರು.

ಹೀಗೆಯೆ, ಇಸ್ಲಾಂ, ಕ್ರೈಸ್ತ, ಜೈನ, ಸೀಖ್ ಮುಂತಾದ ಪರಕೀಯ ಧರ್ಮಗಳ ವಿಧಿ-ವಿಧಾನಗಳನ್ನು ಆಚರಿಸಿ, ಅನುಭವಿಸಿ ಅರಿತುಕೊಂಡರು. ಭಾವಸಮಾಧಿಯಲ್ಲಿ ಆಯಾಮತಸ್ಥಾಪಕರು ಇವರ ಆತ್ಮದಲ್ಲಿ ಲೀನವಾಗುವುದನ್ನೂ ಅನುಭವಿಸುತ್ತಿದ್ದರು. ಇದರಿಂದ ಭಿನ್ನ ಭಿನ್ನ ಧರ್ಮಗಳ ನಡುವೆ ಇದ್ದ ಕೃತ್ರಿಮ ಕೋಟೆಯ ಗೋಡೆಗಳೆಲ್ಲ ಕೆಡೆದು ಬಿದ್ದ ಅನುಭೂತಿಯೂ ಅವರಿಗಾಯ್ತು. ಧರ್ಮ- ಅಧರ್ಮಗಳ ನಡುವೆ ಉಂಟಾಗುವ ಕಲಹ-ವಿರಸಗಳ ಸಮಸ್ಯೆಗೆ ಪರಿಹಾರಾರ್ಥವಾಗಿ ಅವರು ಸ್ವಾರಸ್ಯಕರ ದೃಷ್ಟಾಂತಗಳನ್ನು ಕೊಟ್ಟು, ಹೆಸರುಗಳು ಬೇರೆ ಬೇರೆಯಾಗಿದ್ದರೂ 'ಧರ್ಮ' ಎಂಬ ವಸ್ತು ಒಂದೇ ಎಂದು ತೃಪ್ತಿಕರವಾಗಿ ವಿವರಿಸುತ್ತಿದ್ದರು : ಅವುಗಳಲ್ಲಿ ಒಂದು ದೃಷ್ಟಾಂತ ಹೀಗಿದೆ: ಅನೇಕ ಘಟ್ಟಗಳುಳ್ಳ ಒಂದು ಸರೋವರದಲ್ಲಿ ಹಿಂದೂಗಳು, ಮುಸಲ್ಮಾನರು, ಕ್ರೈಸ್ತರು ಒಂದೊಂದೆಡೆಯಲ್ಲಿ ತಂತಮ್ಮ ಕೊಡಗಳಲ್ಲಿ ನೀರು ತುಂಬಿಕೊಂಡು ಹೋಗುವರಷ್ಟೆ? ನೀರು ಒಂದೇ ಆಗಿದ್ದರೂ ಈ ಮೂವರೂ ಮತಸ್ಥರು ಅದನ್ನು 'ಜಲ್', 'ಪಾನೀ', 'ವಾಟರ್' ಎಂಬ ಹೆಸರುಗಳಿಂದ ಕರೆದರೂ ವಸ್ತು ಒಂದೇ ಅಲ್ಲವೇ ? ಹಾಗೆಯೇ ಧರ್ಮದ ವಿಚಾರ. ಪ್ರತಿಯೊಬ್ಬನೂ ತನ್ನದೇ ಆದ ಧರ್ಮಪಥವನ್ನು ಅನುಸರಿಸಲಿ. ಪ್ರಾಮಾಣಿಕವಾಗಿ ಅನುಸರಿಸಿದಲ್ಲಿ ಆತನು ದೇವರನ್ನು ಕಂಡೇಕಾಣುತ್ತಾನೆ. ಕಲಹಕ್ಕೆ ಅವಕಾಶವೆಲ್ಲಿ ?' ಎಂದು ಕೇಳುತ್ತಾನೆ.

ಸಾಂಸಾರಿಕನೇ ಇರಲಿ, ಸನ್ಯಾಸಿಯೇ ಇರಲಿ ದೈವಭಕ್ತಿ ಮಾನವ ಜೀವನದ ಪ್ರಧಾನ ಸೂತ್ರವಾಗಬೇಕು ಎಂದು ಶ್ರೀ ರಾಮಕೃಷ್ಣರು ಸಂದರ್ಭಕ್ಕೆ ತಕ್ಕಂತೆ ಬಗೆ ಬಗೆಯ ವಚನಗಳನ್ನು ನುಡಿದಿದ್ದಾರೆ. ವೇದೋಕ್ತಿಗಳಿಗೆ ಸಮವೆನಿಸುವ ಅವುಗಳ ಸ್ವಾರಸ್ಯವನ್ನು ಹೃದ್ಗತವಾಗುವಂತೆ ಸವಿಯಬೇಕು, ಜೀವಿಸಬೇಕು: ಕೆಲವನ್ನು ಉದಾಹರಿಸಬಹುದು:-

1. 'ಮನುಷ್ಯ ಮಂಗನ ಮರಿಯಂತಿರಬಾರದು. ಬೆಕ್ಕಿನ ಮರಿಯಂತಿರಬೇಕು. ಮಂಗನ ಮರಿ ತನ್ನ ಸಾಮರ್ಥ್ಯದಿಂದ ತಾಯನ್ನು ಅಪ್ಪಿ ಹಿಡಿದಿರುತ್ತದೆ. ಬೆಕ್ಕಿನ ಮರಿಯಾದರೋ 'ಮೆಂವ್, ಮೆಂವ್' ಎಂದು ಕೂಗಿ ತಾಯಿಯನ್ನು ಕರೆಯುತ್ತಿರುತ್ತದೆ. ತಾಯಿ ಬೆಕ್ಕು ಬಂದು ಅದನ್ನು ಕಚ್ಚಿಕೊಂಡು ಹೋಗುತ್ತದೆ. ನಿಜವಾದ ಭಕ್ತ ಬೆಕ್ಕಿನ ಮರಿಯ ಹಾಗೆ' - ಭಕ್ತಿ ಯಲ್ಲಿ ಸಂಪೂರ್ಣ ಸಮರ್ಪಣೆಯನ್ನು ಒತ್ತಿ ಹೇಳುತ್ತದೆ - ಈ ವಚನ.

2. 'ಜನ ಹೊನ್ನು, ಹೆಣ್ಣು, ಮಣ್ಣುಗಳಿಗಾಗಿ ಕೊಡಗಟ್ಟಲೆ ಕಣ್ಣೀರು ಸುರಿಸುತ್ತಾರೆ. ಆದರೆ ದೇವರಿಗಾಗಿ ಯಾರು ಸುರಿಸುತ್ತಾರೆ ? ಮುಕ್ತಿಯೆಂಬುದು ಕಣ್ಣಿನ ಒಂದು ಹನಿಯಲ್ಲಿ ನೆಲೆಗೊಂಡಿದೆ. ಭಕ್ತಿ ವ್ಯಾಕುಲತೆಯಿಂದ ಕೂಡಿದ್ದರೆ ಮಾತ್ರ ದೈವೀ ಸಾಕ್ಷಾತ್ಕಾರ ಸಾಧ್ಯ'

3. 'ಸಂಸಾರದಲ್ಲಿದ್ದರೆ ತಪ್ಪಲ್ಲ. ಮನಸ್ಸು ದೇವರಲ್ಲಿದ್ದರೆ ಸಾಕು. ನೀರಿನಲ್ಲಿ ದೋಣಿ ಇರಬಹುದು; ಆದರೆ ದೋಣಿಯಲ್ಲಿ ನೀರು ಇರಕೂಡದು'

4. 'ಪಾದರಕ್ಷೆಯಿದ್ದರೆ ಕಾಲಿಗೆ ಮುಳ್ಳು ನಾಟುವುದಿಲ್ಲ. ಹಾಗೆಯೆ, ದೇವರೊಬ್ಬನೇ ಸತ್ಯ, ಉಳಿದುದೆಲ್ಲ ಮಿಥ್ಯ ಎಂಬ ಅರಿವು ದೃಢವಾಗಿದ್ದರೆ ಕಾಮಿನಿ ಕಾಂಚನಗಳಿಂದ ಯಾವ ಅಪಾಯವೂ ತಟ್ಟದು'.

5. 'ಮಕ್ಕಳು ಕಂಬವನ್ನು ಹಿಡಿದುಕೊಂಡು ವೇಗವಾಗಿ ಸುತ್ತುವುದನ್ನು ನೋಡುತ್ತೇವೆ. ಅವರು ಕಂಬವನ್ನು ಗಟ್ಟಿಯಾಗಿ ಹಿಡಿದಿರುವವರೆಗೆ ಬೀಳುವ ಭಯವಿಲ್ಲ. ಹಾಗೆಯೇ ದೇವರನ್ನು ಗಟ್ಟಿಯಾಗಿ ನಂಬಿರುವವರೆಗೆ ಸಂಸಾರದ ವ್ಯಾಪಾರಗಳು ತೊಡಕಾಗುವುದಿಲ್ಲ'.

6. 'ಕೈಗೆ ಎಣ್ಣೆ ಹಚ್ಚಿಕೊಂಡರೆ ಹಲಸಿನ ಹಣ್ಣಿನ ಅಂಟು ಹತ್ತುವುದಿಲ್ಲ. ಹಾಗೆಯೇ ದೈವಭಕ್ತಿಯಿದ್ದರೆ ಪ್ರಾಪಂಚಿಕ ವ್ಯವಹಾರಗಳು ಬಂಧನವಾಗುವುದಿಲ್ಲ'.

7. 'ಪ್ರಪಂಚ ನೀರಿನ ಹಾಗೆ, ಮನಸ್ಸು ಹಾಲಿನ ಹಾಗೆ. ಹಾಲು, ನೀರುಗಳು ಸುಲಭವಾಗಿ ಬೆರೆಯುತ್ತವೆ. ಎರಡನ್ನೂ ಬೇರ್ಪಡಿಸುವುದು ಅಸಾಧ್ಯ. ಆದರೆ ಹಾಲನ್ನು ಹೆಪ್ಪು ಹಾಕಿ, ಮೊಸರು ಮಾಡಿ, ಕಡೆದು, ಬಂದ ಬೆಣ್ಣೆಯನ್ನು ನೀರಿಗೆ ಹಾಕಿದರೆ ಅದು ಬೆರೆಯದೆ ತೇಲುತ್ತದೆ. ಜ್ಞಾನ, ಭಕ್ತಿಗಳಿಂದ ಮನಸ್ಸನ್ನು ಗಟ್ಟಿಗೊಳಿಸಿ ಸಂಸಾರದಲ್ಲಿರಿಸಿದರೆ ಅದು ಬೆರೆಯದೆ ಪ್ರತ್ಯೇಕವಾಗಿ ಉಳಿಯುತ್ತದೆ' ಎಂದಿದ್ದಾರೆ.

ಶ್ರೀ ರಾಮಕೃಷ್ಣರು ಹಾಗೂ ಅವರ ಧರ್ಮಪತ್ನಿ ಶಾರದಾದೇವಿಯವರದು ಅಲೌಕಿಕ ದಾಂಪತ್ಯ. ಇವರು ಸಂಸಾರಿಗಳಾಗದೆ ಸಂಸಾರಿಗಳಿಗೆ ಆದರ್ಶ ಪ್ರಾಯರು. ಒಮ್ಮೆ ಪತಿಯ ಪಾದವನ್ನು ಒತ್ತುತ್ತ ಶಾರದಾ ಮಾತೆ ತಮ್ಮ ಪತಿಯನ್ನು, 'ನನ್ನನ್ನು ನೀವು ಯಾವ ದೃಷ್ಟಿಯಿಂದ ನೋಡುತ್ತೀರಿ? ಎಂದು ಕೇಳಿದರಂತೆ. ಆಗ ಅವರು 'ಗುಡಿಯಲ್ಲಿಯ ದಿವ್ಯ ಮಾತೆಯಂತೆ, ನನ್ನ ಹೆತ್ತ ತಾಯಿಯಂತೆ' ಎಂದರಂತೆ ! ಆಗ ಶಾರದಾದೇವಿಯವರು, - 'ನಾನು ನಿಮ್ಮ ಧರ್ಮ ಪತ್ನಿ, ನಿಮ್ಮ ಗುರಿಯೇ ನನ್ನದು. ನಿಮ್ಮ ಅನುಗ್ರಹದಿಂದ ನಾನೂ ಸಂಸಾರ ಮಾಯೆಯಿಂದ ಮುಕ್ತಳು' ಎಂದರು, ಜಗನ್ಮಾತೆಯಾದರು. ಇಂಥ ದಾಂಪತ್ಯವನ್ನು ಎಲ್ಲರೂ ಅನುಕರಿಸಬೇಕಿಲ್ಲ, ಅನುಕರಿಸಲು ಸಾಧ್ಯವೂ ಇಲ್ಲ. ಆದರೆ ಇಲ್ಲಿಯ ಸತಿ-ಪತಿಗಳ ಭಾವ ಸಾಮರಸ್ಯ ಎಲ್ಲರಿಗೂ ಮಾದರಿ.

ಶ್ರೀ ರಾಮಕೃಷ್ಣರು ಯುಗ ಪ್ರವರ್ತಕರು. ಇವರ ಜೀವನ ಶ್ರೀ ಅರವಿಂದರ ಅತಿಮಾನಸ ಯೋಗಕ್ಕೆ ಮಹಾತ್ಮರ ಅಹಿಂಸಾ ಆಂದೋಲನಕ್ಕೆ, ವಿನೋಬಾರ ಸರ್ವೋದಯ ಚಳವಳಿಗೆ ಸ್ಫೂರ್ತಿಯಿತ್ತುದು ನಿಜ. ಸ್ವಾಮಿ ವಿವೇಕಾನಂದರು ಇವರ ಸಂದೇಶವನ್ನು ಜಗತ್ತಿನಲ್ಲೆಲ್ಲ ಹರಡಿದಾಗ, ರೋಮೆರೋಲಾ, ಆಲ್ಡಸ್ ಹಕ್ಸ್ಲೆ ಯವರಂಥ ಜಗದ್ವಿಖ್ಯಾತ ಪಾಶ್ಚಾತ್ಯ ಮೇಧಾವಿಗಳೂ ಇವರಿಂದ ವಿಶೇಷ ಪ್ರಭಾವಿತರಾದರು. ಶ್ರೀ ರಾಮಕೃಷ್ಣ ಪರಮಹಂಸರು ಜ್ಞಾನ, ಭಕ್ತಿ, ವೈರಾಗ್ಯಗಳ ಅಮೂಲ್ಯ ಭಾಂಡಾರ ! ಇವರ ಜೀವನ ಅಮರ, ವಾಣಿ ಅಮರ, ಇವರು ನಿತ್ಯ ಪ್ರಸ್ತುತರು!

08-02-1994

## ಚಿಂತನ - 1

# ಶ್ರೀ ಅರವಿಂದರನ್ನು ಕುರಿತು

**ಎಸ್.ಆರ್. ಮಳಗಿ**

ಶ್ರೀ ಅರವಿಂದರು ಈ ಶತಮಾನದ ಅತ್ಯುನ್ನತ ಶ್ರೇಣಿಯ ವಿಭೂತಿ ಪುರುಷರು. ಅವರು ಮಾನವ ಕುಲದ ಹಾಗೂ ಪೃಥ್ವಿಯ ದಿವ್ಯ ಭವಿತವ್ಯವನ್ನು ಸಾರಲು ಅವತರಿಸಿದರು. ಉತ್ಕ್ರಾಂತಿ ಪಥದಲ್ಲಿ ಮಾನವನಿನ್ನೂ ಬಹುಮಟ್ಟಿಗೆ ಪ್ರಾಣಿಯ ಅವಸ್ಥೆಯಲ್ಲಿಯೆ ಜೀವನ ನಡೆಸುತ್ತಿದ್ದಾನೆ. ಯೋಚನೆ ಮಾಡುವ ಹಾಗೂ ಮಾತನಾಡುವ ಪ್ರಾಣಿಯೇ ಆತ. ಪ್ರಕೃತಿ ಮಾತೆಗೆ ಇಂಥ ಅರೆಕೊರೆಯ ಸೃಷ್ಟಿಯಿಂದ ತೃಪ್ತಿ ಇಲ್ಲ. ಇಂದು ಕ್ಷುದ್ರ ಪ್ರಾಣಿಯಿಂದ ಮಾನವನು ಯಾವ ಅಂತರದಲ್ಲಿರುವನೋ, ಈ ಮಾನವನಿಂದ ಅಷ್ಟು ಅಂತರದಲ್ಲಿರುವ ಅತಿಮಾನವನನ್ನು ಸೃಷ್ಟಿಸುವ ಯತ್ನದಲ್ಲಿ ಪ್ರಕೃತಿ ಮಾತೆ ತೊಡಗಿದ್ದಾಳೆ. ಈ ಸತ್ಯವನ್ನು ಸಾರಲು ಶ್ರೀ ಅರವಿಂದರು ಧರೆಗಿಳಿದು ಬಂದಿದ್ದಾರೆಂದು ಶ್ರೀಮಾತೆಯರು ನುಡಿದಿದ್ದಾರೆ.

ಶ್ರೀ ಅರವಿಂದರು ಮಹಾಯೋಗಿಗಳು. 'Integral Yoga' ಅಥವಾ 'ಸಮಗ್ರ ಯೋಗ'ದ ಸಾಧನೆಯಲ್ಲಿ ಸಿದ್ಧಿಯನ್ನು ಪಡೆದು, ಈ ನೂತನ ಯೋಗಪಥವನ್ನು ಜಗತ್ತಿನ ಮುಂದೆ ಮಂಡಿಸಿದ್ದಾರೆ. ಈ ಮೊದಲು ರೂಢಿಯಲ್ಲಿದ್ದ ಯೋಗಪಥಗಳಲ್ಲಿ ಬಹುಶಃ ಎಲ್ಲವೂ ಈ ಜಗದ ಜೀವನದಾಚೆಯ ಪರಮಾತ್ಮನೆಡೆಗೆ ಸಾಗುವ ಮಾರ್ಗಗಳಾಗಿದ್ದವು. ಮಾನವನು ಇಹದ ಬಾಳನ್ನು ತೊರೆದು ದೂರ ಎಲ್ಲಿಗೋ ಹೋಗುವಂತೆ - ಕರೆದೊಯ್ಯುತ್ತಿದ್ದವು. ಆದರೆ, ಶ್ರೀ ಅರವಿಂದರ 'ಸಮಗ್ರ ಯೋಗ'ವು ಮಾನವ ಚೇತನವನ್ನು ಪರಮಾತ್ಮನತ್ತ ಮೇಲೆ ಕರೆದೊಯ್ಯುತ್ತ, ಅಲ್ಲಿಯ ಬೆಳಕು, ಶಕ್ತಿ, ಆನಂದಗಳನ್ನು ಮಾನವ ಜೀವಿಯು ಪಡೆದು, ಅಲ್ಲಿಂದ ಕೆಳಗಿಳಿದು ಬಂದು, ಇಲ್ಲಿಯ ಜಗದ ಬಾಳನ್ನು ರೂಪಾಂತರಗೊಳಿಸುವ ಪರಮೋದ್ದೇಶವುಳ್ಳದ್ದಾಗಿದೆ. ಅಂದರೆ, ಭಗವಂತನಲ್ಲಿಗೆ ನಿರಂತರ ಐಕ್ಯವನ್ನು ಸಾಧಿಸಿಕೊಂಡು 'ಅತಿಮಾನಸ'ವೆಂಬ ದಿವ್ಯ ಶಕ್ತಿಯನ್ನು ಕೆಳಗಿಳಿಸಿ ತಂದು ನಮ್ಮ ತನು-ಮನ-ಪ್ರಾಣಗಳ ಹಾಗೂ ಈ ಪೃಥ್ವಿಯ ರೂಪಾಂತರ ಸಿದ್ಧಿಯನ್ನು ಸಾಧಿಸಿಕೊಳ್ಳಬೇಕಾಗಿದೆ. ಇದು ಶ್ರೀ ಅರವಿಂದರ 'ಸಮಗ್ರ ಯೋಗ' ಅಥವಾ 'ಪೂರ್ಣ ಯೋಗ'ದ ಗುರಿ.

ಶ್ರೀ ಅರವಿಂದರ ಈ ನೂತನ ಯೋಗದ ಪ್ರಧಾನ ತತ್ವವು ಭಗವಂತನ ಸಾಕ್ಷಾತ್ಕಾರ ಪಡೆದು, ಪೂರ್ಣವಾಗಿ ಆಧ್ಯಾತ್ಮಿಕ ಚೇತನದಲ್ಲಿಯೆ ಸದಾ ಮುಳುಗಿರುವುದಷ್ಟೆ ಅಲ್ಲ. ಇಡಿಯ ಮಾನವ ಜೀವನವನ್ನು ಮತ್ತು ಜಗತ್ತಿನ ಎಲ್ಲ ಆಗು-ಹೋಗುಗಳನ್ನು ಮಾನವನು ತನ್ನ ಆಧ್ಯಾತ್ಮಿಕ ಚೇತನದ ಹಾಗೂ ಜೀವನದ ಕಾರ್ಯವ್ಯಾಪ್ತಿಗೆ ತೆಗೆದುಕೊಂಡು, ಇಲ್ಲಿಯ ಬಾಳು-ಬದುಕುಗಳನ್ನು ಆಧ್ಯಾತ್ಮಿಕ ತಳಹದಿಯ ಮೇಲೆ ನಡೆಸುವಂಥದ್ದಾಗಿದೆ. ಶ್ರೀ ಅರವಿಂದರು ಪಾಂಡಿಚೆರಿಯ ತಮ್ಮ ಯೋಗ ಸಾಧನೆಯ ಜೀವನದಲ್ಲಿ ಇಡಿಯ ಜಗತ್ತಿನ ಮತ್ತು ಭಾರತ ದೇಶದ ಸಕಲ ವಿದ್ಯಮಾನಗಳನ್ನು ತೀಕ್ಷ್ಣವಾಗಿ ವೀಕ್ಷಿಸುತ್ತಿದ್ದರು. ಅವಶ್ಯವೆನಿಸಿದಾಗ ಅವುಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತ ತಮ್ಮ ಆಧ್ಯಾತ್ಮಿಕ ಶಕ್ತಿಯನ್ನು ಬಳಸುತ್ತಿದ್ದರು.

ಶ್ರೀ ಅರವಿಂದರು ತಮ್ಮ ಯೋಗ ಸಾಧನೆಯನ್ನು 1904ರಿಂದಲೆ ಪ್ರಾರಂಭಿಸಿದರು. 22 ವರ್ಷಗಳ ಸಾಧನೆಯ ತರುವಾಯ, 1926 ನವ್ಹೆಂಬರ್ 24 ರಂದು ತಮ್ಮ ಸಾಧನೆಗೆ ಕಳಸವಿಟ್ಟಂತೆ 'ಅಧಿಮಾನಸ' ಚೇತನವನ್ನು ತಮ್ಮ ದೈಹಿಕ ಚೇತನದಲ್ಲಿಳಿಸಿಕೊಂಡರು. 'ಅಧಿಮಾನಸ' ಚೇತನದ ಈ ಅವತರಣವು 'ಅತಿಮಾನಸ' ಚೇತನ ಅವತರಣಕ್ಕೆ ಪೂರ್ವಭಾವಿಯಾಗಿತ್ತು. 'ಅತಿ ಮಾನಸ'ದ ಅವರತರಣಕ್ಕಾಗಿಯೇ ಅವರು ಶೋಧ ನಡೆಸಿದ್ದರು. ಈ ಶೋಧವು ತಮ್ಮ ವೈಯಕ್ತಿಕ ಘನತೆಗಾಗಿ ಅಲ್ಲ, ಪೃಥಿವೀ ಚೇತನದಲ್ಲಿ ಸತ್ಯ, ಸಾಮರಸ್ಯ, ಶಾಂತಿಗಳು ಸ್ಥಿರವಾಗಿ ನೆಲಸುವಂತೆ ಮಾಡುವುದಕ್ಕಾಗಿ ಎಂದಿದ್ದಾರೆ. ಅತಿಮಾನಸ ಶಕ್ತಿಯನ್ನು ಅವರು ಕಂಡಿದ್ದರು ಮತ್ತು ಅದು ಮೇಲಿಂದಿಳಿದು ಬಂದು ತಮ್ಮ ಚೇತನದಲ್ಲಿ ಥಳ ಥಳನೆ ಮಿಂಚಾಡುತ್ತಿರುವುದನ್ನು ಅನುಭವಿಸಿದ್ದರು.

ತಮ್ಮ ವೈಯಕ್ತಿಕ ಸಾಧನೆಯಿಂದ ಇಂದಿನ ಮಾನವನಿಗೆ ಯಾವುದು ಸಾಧ್ಯ ಎಂಬುದನ್ನು ತೋರಿಸುವುದಿತ್ತು. ಆಂತರಿಕ ವಿಕಾಸ, ವೈಯಕ್ತಿಕ ಮತ್ತು ಸಾಮೂಹಿಕ ಜೀವನದ ಹಾಗೂ ಇಡಿಯ ಪೃಥಿವೀ ಚೇತನದ ರೂಪಾಂತರ ಮತ್ತು ನೂತನ ಶಕ್ತಿಗಳು, ಅಭಿವ್ಯಕ್ತಿ ಸಾಮರ್ಥ್ಯ - ಇವು ಎಲ್ಲ ಮಾನವರಿಗೂ ಸಾಧ್ಯ ಎಂಬುದನ್ನು ತೋರಿಸಿಕೊಡುವುದೇ ಅವರ ಯೋಗ ಸಾಧನೆಯ ಉದ್ದೇಶವಾಗಿತ್ತು.

ಮಾನವನ Aspiration ಅಥವಾ ಅಭೀಪ್ಸೆ ಎಂಬುದು ಪರಮಾತ್ಮನಿಗೆ ಮೊರೆಯಿಡುವ ಪೃಥಿವೀ ಮಾತೆಯ ಕರೆಯೇ ಆಗಿದೆ ಎಂದು ಅವರು ಹೇಳುತ್ತಾರೆ. ಈ ಮೊರೆಯನ್ನು ಕೇಳಿ ಭಗವಂತನು ಒಪ್ಪಿಗೆಯ ಮಾರುತ್ತರ ನೀಡಿದ್ದೇ ಆದಲ್ಲಿ ಮಾನವನ ಭವ್ಯ ರೂಪಾಂತರದ ಸುಮುಹೂರ್ತ ಘಟಿಸಿತೆಂದೇ ಭಾವಿಸಬೇಕು ಎಂದಿದ್ದಾರೆ.

ತಮ್ಮ ಈ 'ಸಮಗ್ರ ಯೋಗ'ದಲ್ಲಿ ಹಳೆಯ ಹಾಗೂ ಹೊಸ ಪದ್ಧತಿಗಳ ಸಾರ ಸತ್ವಗಳ ಸಂಯೋಜನೆ ಇದೆ, ಸಮನ್ವಯವಿದೆ ಎಂದೂ ಅವರು ಹೇಳುತ್ತಾರೆ. ನೈಜ ಸತ್ಯವನ್ನು ಅರ್ಥಮಾಡಿಕೊಳ್ಳುವ ಮೂಲಕ ಜ್ಞಾನ ಯೋಗ, ಹೃದಯದ ಭಕ್ತಿ, ಪ್ರೇಮ ಮತ್ತು ಸಮರ್ಪಣಗಳ ಮೂಲಕ ಭಕ್ತಿ ಯೋಗ, ಸ್ವಾರ್ಥ - ಅಹಂಕಾರಗಳನ್ನು ತೊರೆದು ಸತ್ಯ ಮತ್ತು ಪರಮಾರ್ಥ ತತ್ವಗಳಿಗೆ ಸೇವೆ ಸಲ್ಲಿಸುವ ಮೂಲಕ ಕರ್ಮಯೋಗ - ಈ ಯೋಗತ್ರಯದ ಸಂಯೋಜನೆ, ಸಮನ್ವಯ ಶ್ರೀ ಅರವಿಂದರ ಈ ನೂತನ ಯೋಗದಲ್ಲಿದೆ. ಇದೊಂದು ಚಿರ ನೂತನ ಆಧ್ಯಾತ್ಮಿಕ ಸಾಹಸವೇ ಆಗಿದೆ.

# ಜನಜಾಗೃತಿಗೆ ಶ್ರೀ ಅರವಿಂದರ ಕೊಡುಗೆ

ಎಸ್.ಆರ್. ಮಳಗಿ

ಪೂರ್ಣಯೋಗಿ ಶ್ರೀ ಅರವಿಂದರ ಜೀವನವೇ ಜನಜಾಗೃತಿಗೆ ಅಂತಃಸ್ಫೂರ್ತಿ. ಅವರಿಂದಾದ ಜನಜಾಗೃತಿಯ ಕಾರ್ಯ ಎರಡು ಬಗೆಯದು. ಒಂದು ಬಹಿರಂಗ ಜಾಗೃತಿ, ಇನ್ನೊಂದು ಅಂತರಂಗ ಜಾಗೃತಿ. ಮೊದಲನೆಯದು ನಮ್ಮ ರಾಷ್ಟ್ರದ ಸ್ವಾತಂತ್ರ್ಯ ಯುದ್ಧದ ರಾಜಕೀಯ ರಂಗದ್ದು. ಎರಡನೆಯದು ಅವರ ವಿಶಿಷ್ಟ ಆಧ್ಯಾತ್ಮಿಕ ರಂಗದ್ದು.

ಶ್ರೀ ಅರವಿಂದರು 1906ರಿಂದ 1910ರ ವರೆಗೆ ಸಿಡಿಲು-ಮಿಂಚುಗಳಂತೆ ನಡೆಸಿದ ರಾಷ್ಟ್ರದ ರಾಜಕೀಯ ಜಾಗೃತಿ ನಾಲ್ಕೇ ವರುಷದ್ದು. ಅದು ಅದ್ಭುತ ಪರಿಣಾಮಕಾರಿಯಾಗಿತ್ತು. ಆದರೆ ಅದು ಅಕಸ್ಮಾತ್ತಾಗಿ ನಡುವೇ ಆಧ್ಯಾತ್ಮಿಕ ಜಾಗೃತಿಯ ಕಾರ್ಯದಲ್ಲಿ ಹೇಗೆ ಪರ್ಯವಸಾನಗೊಂಡಿತು ಎಂಬುದನ್ನು ಸಂಗ್ರಹವಾಗಿ ತಿಳಿಸಲು ಇಲ್ಲಿ ಯತ್ನಿಸಲಾಗಿದೆ.

ಚಿಕ್ಕಂದಿನಲ್ಲಿ ಶ್ರೀ ಅರವಿಂದರ ಶಿಕ್ಷಣ ಪಾಶ್ಚಾತ್ಯ ಪದ್ಧತಿಯಲ್ಲಿ ಇಂಗ್ಲೀಷಿನಲ್ಲೇ ನಡೆಯಿತು. ತಾಯ್ನುಡಿಯಾಗಿದ್ದ ಬಂಗಾಲಿ ಕೂಡ ಅವರಿಗೆ ಬರುತ್ತಿರಲಿಲ್ಲ. ಭಾರತೀಯ ಎಂಬ ಯಾವುದರ ಸೋಂಕು ಅವರಿಗೆ ತಟ್ಟದಂತೆ-ತಂದೆ ಡಾ|| ಕೃಷ್ಣಧನ್ ಘೋಷರು ಕಟ್ಟಪ್ಪಣೆ ವಿಧಿಸಿದ್ದರು. ಅವರ ದೃಷ್ಟಿ-ಧೋರಣೆಗಳೇ ಹಾಗಿದ್ದವು. ಏಳನೆಯ ಎಳ ವಯಸ್ಸಿನಲ್ಲಿಯೇ ಅವರು ಶ್ರೀ ಅರವಿಂದ ಬಾಲಕನನ್ನು ಆತನ ಇಬ್ಬರು ಅಣ್ಣಂದಿರೊಂದಿಗೆ ಇಂಗ್ಲೆಂಡಿನಲ್ಲಿರಿಸಿದ್ದರು. ಐ.ಸಿ.ಎಸ್. ಪದವೀಧರನಾಗುವವರೆಗೆ ಆತನ ಶಿಕ್ಷಣದ ವ್ಯವಸ್ಥೆ ಹೀಗೆಯೆ ಇರಬೇಕೆಂಬುದು ಅವರ ಧೋರಣೆಯಾಗಿತ್ತು. ಬಾಲಕ ಅರವಿಂದನದೋ ಪ್ರಚಂಡ ಬುದ್ಧಿಮತ್ತೆ. ಹದಿನೇಳು ತುಂಬುವುದರೊಳಗೆ ಗ್ರೀಕ್, ಲ್ಯಾಟಿನ್, ಫ್ರೆಂಚ್, ಇಂಗ್ಲಿಷ್ ಭಾಷೆಗಳೊಂದಿಗೆ ಪಾಶ್ಚಾತ್ಯ ಏಳು ಭಾಷೆಗಳ ಸಾಹಿತ್ಯದಲ್ಲಿ ಅಗಾಧ ಪರಿಣತಿ ಪಡೆದ, ಯುರೋಪಿನ ಸಮಗ್ರ ಇತಿಹಾಸದ ಹುರುಳು-ತಿರುಳನ್ನರಿತುಕೊಂಡ. ಅನಂತರ ನಡೆದ ಐ.ಸಿ.ಎಸ್. ಬರೆಹದ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ಯಶಸ್ಸು ಪಡೆದ. ಆದರೆ ಕುದುರೆ ಸವಾರಿ ಪರೀಕ್ಷೆಗೆ ಉದ್ದೇಶಪೂರ್ವಕ ಆತ ಹೋಗಲಿಲ್ಲ. ಐ.ಸಿ.ಎಸ್. ಪದವೀಧರನಾಗುವುದು ತಪ್ಪಿ ಹೋಯ್ತು. ಇದರಿಂದ ಆತನಿಗೆ ಅಸಮಾಧಾನವೆಷ್ಟೂ ಇರಲಿಲ್ಲ. ಆಗ ಆತನ ಲಕ್ಷ್ಯ ಭಾರತದ ರಾಜಕೀಯದತ್ತ ಹೊರಳಿತ್ತು. 'ಇಂಡಿಯನ್ ಮಜಲಿಸ್' ಹಾಗೂ 'ಕಮಲ ಮತ್ತು ಕಠಾರಿ' ಎಂಬ ಭಾರತೀಯ ವಿದ್ಯಾರ್ಥಿಗಳ ಸಂಘ-ಸಂಸ್ಥೆಗಳ ಚಟುವಟಿಕೆಗಳಲ್ಲಿ ಆತನು ಮಗ್ನನಾಗಿದ್ದ.

ಇಂಗ್ಲಂಡಿನ ಶಿಕ್ಷಣ ಮುಗಿಸಿ 1893ರ ಆರಂಭದಲ್ಲಿ ಶ್ರೀ ಅರವಿಂದರು ಸ್ವದೇಶಕ್ಕೆ ಮರಳಿದರು. ಭಾರತದ ಪುಣ್ಯ ಭೂಮಿಯ ಮೇಲೆ ಕಾಲಿರಿಸಿದೊಡನೆ ಒಂದು ದಿವ್ಯ ಶಾಂತಿ ಮೈ-ಮನಗಳಲ್ಲಿ ಇಳಿದು ಬಂದಂತೆ ಅವರಿಗೆ ಅನುಭವವಾಯ್ತು. ಈ ದಿವ್ಯಾನುಭವವು ಅವರನ್ನು ಅನಂತರ ಬಹುಕಾಲ ಆವರಿಸಿತ್ತು.

ಭಾರತಕ್ಕೆ ಮರಳಿದ ಶ್ರೀ ಅರವಿಂದರು ಬಡೋದೆಯ ಮಹಾರಾಜರ ಅಪೇಕ್ಷೆಯಂತೆ ಅವರ ಸರ್ಕಾರೀ ನೌಕರಿಯಲ್ಲಿ ಹಲವು ಖಾತೆಗಳಲ್ಲಿ ಹದಿಮೂರು ವರ್ಷಕಾಲ ದುಡಿದರು. ಅವರು ಪ್ರಾಧ್ಯಾಪಕರಾಗಿ ಸೇವೆ

ಸಲ್ಲಿಸುತ್ತಿದ್ದಾಗ ಶಿಕ್ಷಣ ವೃತ್ತಿಯೊಂದಿಗೆ ಲೇಖನ ಕಾರ್ಯ, ಸಾಹಿತ್ಯ ಸೃಷ್ಟಿ, ಯೋಗ ಸಾಧನೆ, ದೇಶ ಸೇವೆ ಮುಂತಾದ ಕಾರ್ಯಗಳಲ್ಲಿ ತೊಡಗುತ್ತಲೆ ತರುಣ ವಿದ್ಯಾರ್ಥಿಗಳ ರಾಷ್ಟ್ರೀಯ ಜಾಗೃತಿಯ ಕಡೆಗೆ ವಿಶೇಷ ಗಮನ ಹರಿಸಿದರು. ಅವರ ಪಾಠ ಪ್ರವಚನಗಳು ಹಾಗೂ ಉಪನ್ಯಾಸಗಳು ಅತ್ಯಂತ ಸ್ಫೂರ್ತಿದಾಯಕವಾಗಿದ್ದವು. ಈ ಕುರಿತು ಅವರ ಅಂದಿನ ವಿದ್ಯಾರ್ಥಿಗಳಾಗಿದ್ದ ಕೆ.ಎಂ.ಮುನ್ಷಿ, ಎ.ಬಿ. ಪುರಾಣಿಯವರಂಥ ಮೇಧಾವಿಗಳು ಹಾಡಿ ಹೊಗಳಿದ್ದಾರೆ.

ಬಡೋದೆಗೆ ಬಂದ ಕೆಲ ಕಾಲದಲ್ಲಿಯೆ 'ಇಂದು ಪ್ರಕಾಶ' ಎಂಬ ಪತ್ರಿಕೆಯಲ್ಲಿ 'New Lamps for Old' - 'ಹಳೆಯ ದೀಪಗಳಿಗೆ ಬದಲಾಗಿ ಹೊಸ ದೀಪಗಳು' ಎಂಬ ಉಗ್ರ ರಾಜಕೀಯ ಲೇಖನ ಮಾಲೆಯನ್ನು ಆರಂಭಿಸಿದರು. ಅಂದಿನ ರಾಷ್ಟ್ರೀಯ ಕಾಂಗ್ರೆಸ್ಸಿನ ಮಂದಗಾಮೀ ನೀತಿಯನ್ನೂ ಅದಕ್ಕೆ ಕಾರಣವಾಗಿದ್ದ ದುರ್ಬಲ ಮುಖಂಡತ್ವವನ್ನೂ ಕಟುವಾಗಿ ಟೀಕಿಸತೊಡಗಿದರು. ಇದರ ಜೊತೆಗೆ ದೇಶದ ಎಲ್ಲೆಡೆಗಳಲ್ಲಿ ಕ್ರಾಂತಿಕಾರೀ ತರುಣರ ಗುಪ್ತ ಸಂಘಟನೆಗಳ ಜಾಲ ಹಬ್ಬಿಸಿದರು. ಬಂಡಾಯದ ಮೂಲಕ ಬ್ರಿಟಿಶ್ ಸಾಮ್ರಾಜ್ಯ ಸತ್ತೆಯನ್ನು ಕಿತ್ತೆಸೆಯುವ ಕಾರ್ಯದಲ್ಲಿ ಮುಳುಗಿ ಹೋದರು. ಇದಕ್ಕೆಂದೇ 'ಭವಾನೀ ಮಂದಿರ'ದ ಯೋಜನೆ ಹಾಕಿಕೊಂಡರು. 'ಭವಾನೀ ಮಂದಿರ' ಎಂಬ ಇವರ ಚಿಕ್ಕ ಪುಸ್ತಕವು ಅಂದಿನ ಕ್ರಾಂತಿಕಾರಿಗಳಿಗೆ ದಿನ ನಿತ್ಯ ಪಠಿಸುವ ಪಾರಾಯಣ ಗ್ರಂಥವಾಯ್ತು. ಇವೆಲ್ಲದರಿಂದ ಪ್ರಭಾವಿತರಾದ ಸಾವಿರಾರು ಜನ ಬಂಗಾಲೀ ಯುವಕರು ರಾಷ್ಟ್ರದ ಸ್ವಾತಂತ್ರ್ಯ ಯಜ್ಞದಲ್ಲಿ ಸರ್ವಸ್ವವನ್ನು ಬಲಿಗೊಡಲು ಸನ್ನದ್ಧರಾದರು.

ಈ ಸಮಯದಲ್ಲಿ ಶ್ರೀ ಅರವಿಂದರು ದೇಶದ ಜನತೆಯ ಮನಃ ಸ್ಥಿತಿಯ ಮಟ್ಟವನ್ನರಿತು ಸ್ವಾತಂತ್ರ್ಯ ಸಿದ್ಧಿಗೋಸುಗ ಆಧ್ಯಾತ್ಮ ಚಿಂತನ ಹಾಗೂ ಯೋಗ ಸಾಧನೆಗಳಲ್ಲಿ ಆಳವಾಗಿ ಮುಳುಗಿದರು. ರಾಷ್ಟ್ರವೆಂದರೇನು? ಜನ್ಮ ಭೂಮಿಯೆಂದರೇನು? ಎಂಬುದನ್ನು ಮನಮುಟ್ಟುವಂತೆ ಭಾರತೀಯ ಜನತೆಗೆ ವಿವರಿಸಿ ಹೇಳಿದ ಮೊದಲಿಗರೆಂದರೆ ಶ್ರೀ ಅರವಿಂದರು. ಮಾತೃ ಭೂಮಿ ಎಂದರೆ ಬರಿ ಮಣ್ಣಲ್ಲ, ಅದು ಅಲಂಕಾರದ ಮಾತಲ್ಲ. ಅದೊಂದು ಶಕ್ತಿ, ಪ್ರಚಂಡ ಶಕ್ತಿ ; ಸಕಲ ಶಕ್ತಿಗಳೂ ಮೈದೋರಿದ ಮಹಾ ಶಕ್ತಿಯೇ ಈ ಭಾರತ ಮಾತೆ ! ಆಕೆ ಮಹಿಷಾಸುರ ಮರ್ದಿನೀ ಎಂದು ಘೋಷಿಸುತ್ತಿದ್ದರು. ಶ್ರೀ ಅರವಿಂದರ ಕರೆಗೆ ಓಗೊಟ್ಟು ಯುವಕ - ಯುವತಿಯರು ಸಹಸ್ರ ಸಹಸ್ರ ಸಂಖ್ಯೆಯಲ್ಲಿ ರಾಷ್ಟ್ರದ ಬಿಡುಗಡೆಗಾಗಿ ದುಡಿಯಲು, ಮಡಿಯಲು ಧಾವಿಸಿ ಬಂದರು ! ಸ್ವಾಮಿ ವಿವೇಕಾನಂದರ ಮಾನಸ ಪುತ್ರಿಯೆನಿಸಿದ್ದ ಉಗ್ರ ಕ್ರಾಂತಿಕಾರಿಣಿ ಸಿಸ್ಟರ್ ನಿವೇದಿತಾ ಶ್ರೀ ಅರವಿಂದರ ಈ ಆಂದೋಲನದಲ್ಲಿ ಪಾಲ್ಗೊಳಲು ಮುಂದೆ ಬಂದರು. ಕ್ರಾಂತಿಕಾರಕ ಸಂಘಟನೆಯ ಕಾರ್ಯದಲ್ಲಿ ಪ್ರಮುಖ ಪಾತ್ರ ವಹಿಸಿದರು.

ಇದೇ ಸುಮಾರಿಗೆ ಬ್ರಿಟಿಷ್ ಸರ್ಕಾರವು ಬಂಗಾಲ ಪ್ರಾಂತ್ಯದ ವಿಭಜನೆಗೆ ಕೈ ಹಾಕಿತು. ಬಂಗಾಲದ ಜನತೆ ಸಿಡಿದೆದ್ದಿತು!. ಬ್ರಿಟಿಶರ ವಿರುದ್ಧ ಜನಜಾಗೃತಿಯುಂಟು ಮಾಡಲು ಇದೊಂದು ಉತ್ತಮ ಅವಕಾಶವಾಯ್ತು. ಆಗ ಶ್ರೀ ಅರವಿಂದರು ಬಡೋದೆಯ ಸರ್ಕಾರೀ ಕೆಲಸಕ್ಕೆ ರಾಜೀನಾಮೆಯಿತ್ತು ಕಲ್ಕತ್ತೆಗೆ

ಬಂದರು. ಅಲ್ಲಿ ಹೊಸದಾಗಿ ಆರಂಭವಾಗಿದ್ದ ನ್ಯಾಶನಲ್ ಕಾಲೇಜಿಗೆ ಪ್ರಿನ್ಸಿಪಾಲರಾದರು. ವಂಗ-ಭಂಗ ಚಳವಳಿಯ ಜ್ವಾಲೆ ಭುಗಿಲೆಂದು ಹರಡಿತು. ಆಗ ರಾಷ್ಟ್ರೀಯ ಕಾಂಗ್ರೆಸ್ಸಿನ ಮಂದಗಾಮೀ ಮುಖಂಡರು ಸರ್ಕಾರದೊಂದಿಗೆ ಯಾವ ಬಗೆಯ ಒಪ್ಪಂದಕ್ಕೂ ಸಹಿ ಹಾಕಕೂಡದೆಂದು ಶ್ರೀ ಅರವಿಂದರು 'No Compromise' - 'ಒಪ್ಪಂದ ಬೇಕಿಲ್ಲ' ಎಂಬ ಪುಸ್ತಕವನ್ನು ಪ್ರಕಟಿಸಿದರು. ಕಲ್ಕತ್ತಾ ಕಾಂಗ್ರೆಸ್ಸಿನ ಅಧಿವೇಶನವು ಮಂದಗಾಮೀ ಮುಖಂಡರಾಗಿದ್ದ ದಾದಾಭಾಯಿ ನವರೋಜಿಯವರ ಅಧ್ಯಕ್ಷತೆಯಲ್ಲಿ ನಡೆದಿತ್ತು. ಆಗ 'ಸ್ವರಾಜ್ಯವೇ ರಾಷ್ಟ್ರೀಯ ಕಾಂಗ್ರೆಸ್ಸಿನ ಗುರಿ' ಎಂಬ ನಿರ್ಣಯವು ಶ್ರೀ ಅರವಿಂದರ ಪ್ರಭಾವದ ಒತ್ತಡದಿಂದ ಮೊದಲ ಬಾರಿ ಸ್ವೀಕರಿಸಲ್ಪಟ್ಟಿತು. ಆಗ 'ವಂದೇ ಮಾತರಂ' ಪತ್ರಿಕೆಯ ತಮ್ಮ ಸಂಪಾದಕೀಯಗಳ ಮೂಲಕ 'ಪೂರ್ಣ ಸ್ವರಾಜ್ಯ'ದ ಕಲ್ಪನೆಯನ್ನು ಆವೇಶಭರಿತರಾಗಿ ಮಂಡಿಸುತ್ತ ಸಾಗಿದ್ದರು. ಶ್ರೀ ಅರವಿಂದರ ಉಗ್ರಗಾಮೀ ಪಕ್ಷದ ಕಡೆಗೆ ಒಲಿದು ಬಂದಿದ್ದ ಲೋಕಮಾನ್ಯ ಬಾಲಗಂಗಾಧರ ಟಿಳಕರು - 'ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು; ಅದನ್ನು ಪಡೆದೇ ತೀರುವೆ !' ಎಂದು ಘೋಷಿಸಿದ್ದು ಈ ಸಂದರ್ಭದಲ್ಲಿಯೇ.

'ವಂದೇ ಮಾತರಂ' ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಶ್ರೀ ಅರವಿಂದರ ಲೇಖನಗಳನ್ನು ರಾಜದ್ರೋಹಾತ್ಮಕ ಎಂದು ಆರೋಪಿಸಿ, ಬ್ರಿಟಿಶ್ ಸರ್ಕಾರವು ಅವರನ್ನು ಬಂಧಿಸಿತು. ವಿಚಾರಣೆಯಲ್ಲಿ ಅವರು ನಿರ್ದೋಷಿಯೆಂದು ತೀರ್ಮಾನಿಸಿ ಬಿಡುಗಡೆ ಮಾಡಲ್ಪಟ್ಟರು. ಆಗ ಶ್ರೀ ಅರವಿಂದರು ರಾಷ್ಟ್ರನಾಯಕರೆಂದು ಘೋಷಿಸಲ್ಪಟ್ಟರು. ಕೋಟಿ ಕೋಟಿ ಜನ ದೇಶ ಭಕ್ತರು ಭಕ್ತಿಯಿಂದ ಅವರ ಜೈ ಜೈಕಾರಕ್ಕೆ ತೊಡಗಿದರು! ಕವಿ ರವೀಂದ್ರರು ಅವರನ್ನು ಕುರಿತು ಪ್ರಶಂಸಾಪರ ಗೀತೆ ರಚಿಸಿ ಹಾಡಿದರು! ಸುರತ್ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಶ್ರೀ ಅರವಿಂದರು ತಮ್ಮ ಲೇಖನ ಹಾಗೂ ಭಾಷಣಗಳಲ್ಲಿ ಪ್ರಕಟಪಡಿಸುತ್ತಿದ್ದ ಪೂರ್ಣ ಸ್ವಾತಂತ್ರ್ಯ, ಬ್ರಿಟಿಶ್ ಸರ್ಕಾರದೊಂದಿಗೆ ಅಸಹಕಾರ, ವಿದೇಶೀ ವಸ್ತುಗಳ ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಪ್ರಚಾರ ಇತ್ಯಾದಿಗಳ ಬಗ್ಗೆ ನಿರ್ಣಯಗಳನ್ನು ಮಂಡಿಸಲಾಯ್ತು. ಆಗ ಮಂದಗಾಮಿ - ಉಗ್ರಗಾಮಿಗಳ ನಡುವೆ ಕುರುಕ್ಷೇತ್ರವೇ ನಡೆದುಹೋಯ್ತು.

1908 ರಲ್ಲಿ ಶ್ರೀ ಅರವಿಂದರನ್ನು ಮತ್ತೆ ಬಂಧಿಸಲಾಯ್ತು. 'ವಂದೇ ಮಾತರಂ' ಘೋಷಣೆ ಮಾಡಿದ್ದಕ್ಕೆ ಬಾಲಕನೊಬ್ಬನಿಗೆ ಛಟಕೀ ಶಿಕ್ಷೆ ವಿಧಿಸಲಾಗಿತ್ತು- ಇದರಿಂದ ಕೆರಳಿದ್ದ ಕ್ರಾಂತಿಕಾರೀ ತರುಣರಿಂದ ಶಿಕ್ಷೆ ವಿಧಿಸಿದ್ದ ಮ್ಯಾಜಿಸ್ಟ್ರೇಟನ ಹತ್ಯೆಯ ಪ್ರಯತ್ನ ನಡೆಯಿತು. ಈ ಸಂದರ್ಭದಲ್ಲಿ ಶ್ರೀ ಅರವಿಂದರನ್ನು ಕೊಲೆಯ ಆರೋಪಿಯೆಂದು ಬಂಧಿಸಿ, ಒಂದು ವರ್ಷ ಕಾಲ ಅಲಿಪುರ ಜೇಲಿನಲ್ಲಿ ಇರಿಸಲಾಗಿತ್ತು. ಸೆರೆಮನೆಯ ವಾಸದಲ್ಲಿ ಅವರು ಗೀತಾ ಪಠಣ ಹಾಗೂ ಯೋಗಾಭ್ಯಾಸದಲ್ಲಿ ಗಾಢವಾಗಿ ಮುಳುಗಿದರು. ಆಗ ಹದಿನೈದು ದಿನಗಳವರೆಗೆ ತಮಗೆ ಸ್ವಾಮಿ ವಿವೇಕಾನಂದರ ಧ್ವನಿ ಕೇಳ ಬಂದಿತೆಂದೂ ಅವರಿಂದ ತಮ್ಮ ಯೋಗ ಸಾಧನೆಯ ವಿಚಾರದಲ್ಲಿ ಮಾರ್ಗದರ್ಶನ ದೊರೆಯಿತೆಂದೂ ತಿಳಿಸಿದ್ದಾರೆ. ಮತ್ತು ಆಗ ತಮಗೆ ಶ್ರೀ ವಾಸುದೇವನ ವಿರಾಟ್ ರೂಪದ ದರ್ಶನ, 'ವಾಸುದೇವಸ್ಸರ್ವಂ'-'ಎಲ್ಲವೂ ವಾಸುದೇವಮಯ' ಎಂಬ ಸಾಕ್ಷಾತ್ಕಾರವುಂಟಾಯಿತೆಂದೂ ತಿಳಿಸಿದ್ದಾರೆ. ಈ ಸೆರೆಮನೆಯ ವಾಸದಿಂದ ತಮಗೆ ಭಗವಂತನ ದರ್ಶನವಾಯ್ತೆಂದು ಹೇಳಿ ತಮ್ಮ ವ್ಯಕ್ತಿತ್ವದ

ಆಧ್ಯಾತ್ಮೀಕರಣವು ಸಂಪೂರ್ಣವಾಗಿ ಸಫಲಗೊಂಡಿತೆಂದು ತಿಳಿಸಿದ್ದಾರೆ. ನ್ಯಾಯಾಲಯದಲ್ಲಿ ಶ್ರೀ ಅರವಿಂದರ ಪರವಾಗಿ ವಾದಿಸುತ್ತ, ನ್ಯಾಯವಾದಿ ಚಿತ್ತರಂಜನದಾಸ್ ಅವರುಈ ಅವರ ಪರಿವರ್ತನವನ್ನು ಕುರಿತೇ ಹೀಗೆ ಘೋಷಿಸಿದರು: ''ಶ್ರೀ ಅರವಿಂದರು ಸಾಮಾನ್ಯರಲ್ಲ. ಅವರು ಶ್ರೇಷ್ಠ ಭಕ್ತ ಕವಿ, ರಾಷ್ಟ್ರೀಯತ್ವದ ಪ್ರವಾದಿ, ಮನುಕುಲದ ಪ್ರೇಮಿ ಎಂದು ಮುಂತಾಗಿ ಭವಿಷ್ಯತ್ಕಾಲದಲ್ಲಿ ಜಗವೆಲ್ಲ ಕೊಂಡಾಡುವುದು. ಈಗ ಅವರು ನಿಂತಿರುವುದು ನ್ಯಾಯಾಲಯದ ಸಲಾಕೆಗಳ ಎದುರಿಗಷ್ಟೆ ಅಲ್ಲ, ಇತಿಹಾಸದ ಉಚ್ಚ ನ್ಯಾಯಾಲಯದ ಸಲಾಕೆಗಳ ಮುಂದೆ!'' - ಹೀಗೆ ಮುಂತಾಗಿ ವಾದಿಸಿ ನ್ಯಾಯಾಧೀಶರಿಗೆ ಮನವರಿಕೆ ಮಾಡಿಕೊಟ್ಟರು. ಅವರ ಈ ವಾಣಿ ನೈಜ ಭವಿಷ್ಯವಾಣಿಯೇ ಆಗಿದೆ! ಬಿಡುಗಡೆಯ ನಂತರ 'ಉತ್ತರ ಪಾರಾ' ಭಾಷಣದಲ್ಲಿ ಶ್ರೀ ಅರವಿಂದರ ದಿವ್ಯ ವಾಣಿಯೆ ಕೇಳ ಬಂದಿತ್ತು. ಶ್ರೋತೃಗಳಿಗೆ ವಿದ್ಯುತ್ ಸಂಚಾರವಾದಂತಾಗಿತ್ತು !.

ಬಿಡುಗಡೆಯ ನಂತರವೂ ಶ್ರೀ ಅರವಿಂದರನ್ನು ಆಜೀವ ಬಂಧನದಲ್ಲಿಡುವ ಸಂಚು ಬ್ರಿಟಿಶ್ ಸರ್ಕಾರದ್ದಾಗಿತ್ತು. ಇದನ್ನರಿತ ಸಿಸ್ಟರ್ ನಿವೇದಿತಾ ಅವರ ಕೆಲವು ಸೂಚನೆಗಳಿಗೆ ಉತ್ತರವಾಗಿ ಶ್ರೀ ಅರವಿಂದರು - ''ಅಂತರಾತ್ಮನ ಆದೇಶದಂತೆ ವರ್ತಿಸುವೆ'' ಎನ್ನುತ್ತಿದ್ದರು!. ಹಾಗೆ ಒಳದನಿಯ ಆದೇಶ ಬಂದಾಗ ಮೊದಲು ಫ್ರೆಂಚ್ ಆಡಳಿತದ ಚಂದ್ರನಗರಕ್ಕೆ-ಅನಂತರ ಪಾಂಡಿಚೆರಿಗೆ ಕೆಲವು ಆತ್ಮೀಯ ಶಿಷ್ಯರೊಂದಿಗೆ ಹೋಗಿ ತಮ್ಮ ಯೋಗ ಸಾಧನೆಯಲ್ಲಿ ಪೂರ್ಣವಾಗಿ ಮಗ್ನರಾದರು. ಇಲ್ಲಿಗೆ ಅವರ ಬಹಿರಂಗ ಜನಜಾಗೃತಿಯ ಘಟ್ಟ ಮುಗಿಯಿತು.

1914ರ ಮಾರ್ಚ್ 29ರಂದು ಪಾಲ್ ರಿಚರ್ಡ್- ಮಿರಾ ರಿಚರ್ಡ್ ದಂಪತಿಗಳು ಪಾಂಡಿಚೆರಿಗೆ ಬಂದು ಶ್ರೀ ಅರವಿಂದರನ್ನು ಕಂಡರು. ಇಬ್ಬರೂ ಅವರಿಂದ ಪ್ರಭಾವಿತರಾದರು. ಅವರ ಆಧ್ಯಾತ್ಮಿಕ ವಿಚಾರಗಳನ್ನು ಪ್ರಚುರಪಡಿಸಲು 'ಆರ್ಯ' ಪತ್ರಿಕೆಯನ್ನು ಆರಂಭಿಸಲು ಸೂಚಿಸಿದವರು ಪಾಲ್ ರಿಚರ್ಡ್ ಅವರೇ!. ಈ ಪತ್ರಿಕೆಯಲ್ಲಿ ಶ್ರೀ ಅರವಿಂದರ 'ಗೀತಾ ಪ್ರಬಂಧಗಳು', 'ದಿವ್ಯ ಜೀವನ', 'ಯೋಗ ಸಮನ್ವಯ', 'ವೇದ ರಹಸ್ಯ', 'ಉಪನಿಷತ್ತುಗಳು', 'ಭಾರತ-ಸಂಸ್ಕೃತಿಯ ಮೂಲ ತತ್ವಗಳು' - ಮುಂತಾದ ಉದ್ಗ್ರಂಥಗಳು ಧಾರಾಕಾರವಾಗಿ ಪ್ರಕಟವಾದವು. ಅವರ 'ಸಾವಿತ್ರಿ' ಮಹಾಕಾವ್ಯ ರಚನೆ ಅವರ 'ಸಮಗ್ರ ಯೋಗ' ಸಾಧನೆಯೊಂದಿಗೆ ಇಡಿಯ ಜೀವನ ಪರ್ಯಂತ ಸಾಗುತ್ತ ಬಂತು. ಮದರ್- ಶ್ರೀಮಾತೆಯೆಂದು ಪ್ರಖ್ಯಾತರಾದ ಶ್ರೀಮತಿ ಮಿರಾ ರಿಚರ್ಡ್ ಅವರು ಶ್ರೀ ಅರವಿಂದಾಶ್ರಮವನ್ನು ಕಟ್ಟಿ ಅಲ್ಲಿಯೇ ನೆಲಸಿದರು. ಆಶ್ರಮವಾಸೀ ಸಾಧಕರಿಗೆ ಮಾರ್ಗದರ್ಶಕರಾದರು. 1926 ರ ನವ್ಹೆಂಬರ್ 24 ರಂದು 'ಅಧಿಮಾನಸ' ಚೇತನದ ಅವತರಣವಾದ ನಂತರ ಶ್ರೀ ಅರವಿಂದರು ಏಕಾಂತ ಯೋಗ ಸಾಧನೆಯಲ್ಲಿ ಗಾಢವಾಗಿ ತೊಡಗಿದರು. ಇಲ್ಲಿಂದ ಆರಂಭವಾದುದು ಅವರ ಆಂತರಂಗಿಕ ಜನಜಾಗೃತಿ. ಇಂದಿಗೂ ಎಂದೆಂದಿಗೂ ನಿರಂತರವಾಗಿ ನಡೆಯುತ್ತಿರುವ ಆಧ್ಯಾತ್ಮಿಕ ಜಾಗೃತಿಯಿದು. ರಾಜಕೀಯ ರಂಗದ ಬಹಿರಂಗ ಜಾಗೃತಿಯ ಬೆಲೆ ಕಟ್ಟಬಹುದು. ಆದರೆ ಶ್ರೀ ಅರವಿಂದರು ಮಾನವ ಕುಲಕ್ಕೆ ನೀಡಿದ 'ಅತಿಮಾನಸ ಯೋಗ' ಅಥವಾ 'ಸಮಗ್ರ ಯೋಗ' ದ ಆಧ್ಯಾತ್ಮಿಕ, ಯೌಗಿಕ ಜನಜಾಗೃತಿಯ ಆಳವನ್ನರಿಯಲು ಸಾಧ್ಯವೆ?

# ಜೀವನಮೌಲ್ಯ ವಿಚಾರ

ಎಸ್.ಆರ್.ಮಳಗಿ

ವೈದಿಕ ಸಂಸ್ಕೃತಿಯ ಪರಂಪರೆಯಲ್ಲಿ ಸಾಗುತ್ತ ಬಂದ ಭಾರತೀಯರಾದ ನಮ್ಮ ಜೀವನದ ಮೌಲ್ಯಗಳು ಮುಖ್ಯವಾಗಿ ನಾಲ್ಕು ಎಂದು ಗುರುತಿಸಲಾಗಿದೆ. ಅವಾವುವೆಂದರೆ, - ಧರ್ಮ, ಅರ್ಥ, ಕಾಮ, ಮೋಕ್ಷ ಎಂಬವು. ಇವನ್ನು ಪುರುಷಾರ್ಥಗಳು ಎಂದು ಕರೆಯಲಾಗುತ್ತದೆ. ಪುರುಷಾರ್ಥ ಎಂದರೆ ಮಾನವನ ಆದರ್ಶಗಳು. ಜೀವನವನ್ನು ಉತ್ತಮಪಡಿಸಿ ಮಾನವನನ್ನು ಕೃತಕೃತ್ಯನನ್ನಾಗಿ ತೇಜಸ್ವಿಯನ್ನಾಗಿ ಮಾಡುವ ಪರಮೋಚ್ಚ ಮೌಲ್ಯಗಳಿವು. ಪುರುಷಾರ್ಥ ಪದದಲ್ಲಿಯ 'ಅರ್ಥ' ಎಂಬುದನ್ನು ಜೀವನ ಮೌಲ್ಯ ಎಂದು ಅರ್ಥೈಸಬಹುದು. ಪ್ರತಿಯೊಬ್ಬ ಮಾನವನು ತನ್ನ ಸ್ವಂತದ ಸಂಸಾರ ನಿರ್ವಹಣೆಗಾಗಿ ಹಾಗೂ ಸಮಾಜ, ದೇಶ ಮತ್ತು ಜಗತ್ತು ಇವುಗಳಿಗಾಗಿ ಮಾಡಬೇಕಾದ ಸೇವೆ, ಕರ್ತವ್ಯ ಇವೆಲ್ಲ ಧರ್ಮ. ಈ ಧರ್ಮ ಸಾಧನೆಗೆ ಅವಶ್ಯವೆನಿಸುವ ಸಾಧನ ಸಾಮಗ್ರಿ ಎಂದರೆ ಧನ ಧಾನ್ಯಾದಿ ಸಂಪತ್ತಿನ ಸಂಪಾದನೆ ಅರ್ಥ. ಮೂರನೆಯದಾಗಿ,-ತನ್ನ ಕುಟುಂಬ-ನಿರ್ವಹಣೆ ಮತ್ತು ಸಮಾಜ ಸೇವೆಗಳ ಸಂದರ್ಭದಲ್ಲಿ ಮಾನವನಲ್ಲಿ ಸಹಜವಾಗಿ ಉಂಟಾಗುವ ಬಗೆಬಗೆಯ ಆಶೆ-ಆಕಾಂಕ್ಷೆಗಳ ಪೂರ್ೈಕೆಯೇ ಕಾಮ. ನಾಲ್ಕನೆಯದಾಗಿ - ಈ ಮೂರು ಪುರುಷಾರ್ಥಗಳ ಸಾಧನೆಯಲ್ಲಿ ಸಿದ್ಧಿಯ ನೆಲೆಯನ್ನು ಮುಟ್ಟಿದಾಗ ಆತ್ಮ ಸಾಕ್ಷಾತ್ಕಾರ ಪಡೆದು ಭಗವದ್ಗೀತೆ ಹೇಳುವ ಸ್ಥಿತಪ್ರಜ್ಞ ಸ್ಥಿತಿಯನ್ನು ಅನುಭವಿಸುವುದೇ ಮೋಕ್ಷ. ಮೋಕ್ಷವೆಂಬುದು ಮಾನವನು ಜೀವಂತವಿರುವಾಗಲೇ ಪಡೆಯಬಹುದಾದ ಜೀವನ್ಮುಕ್ತಿ ಎಂದು ಕೆಲವರು ಹೇಳಿದರೆ, ಮರಣಾನಂತರ ದೊರೆಯುವ ಪರಮಾತ್ಮಸಾಕ್ಷಾತ್ಕಾರ ಸ್ಥಿತಿ ಎಂದು ಇನ್ನು ಕೆಲವರು ಹೇಳುತ್ತಾರೆ.

ಇನ್ನು ಧರ್ಮಾರ್ಥ ಕಾಮುಗಳ ಪರಸ್ಪರ ಸಂಬಂಧವನ್ನು ಮಹಾಭಾರತವು ಹೀಗೆ ಹೇಳುತ್ತದೆ :-

ಧರ್ಮಾರ್ಥೌ ಧರ್ಮ ಕಾಮೌಚ-ಕಾಮಾರ್ಥೌಚ-ಅಪೀಡಯನ್ ।

ಧರ್ಮಾರ್ಥ ಕಾಮಾನ್ ಯಃ ಅಭ್ಯೇತಿ ಸಃ ಅತ್ಯಂತಂ ಸುಖಮಶ್ನುತೇ ॥

-ಎಂದರೆ ಧರ್ಮ ಅರ್ಥಗಳಿಗಾಗಲಿ, ಧರ್ಮ ಕಾಮುಗಳಿಗಾಗಲಿ, ಕಾಮ ಅರ್ಥಗಳಿಗಾಗಲಿ ಪರಸ್ಪರ ಪೀಡೆ ತಟ್ಟದಂತೆ ಯಾರು ಧರ್ಮ, ಅರ್ಥ, ಕಾಮುಗಳೆಂಬ ಪುರುಷಾರ್ಥಗಳನ್ನು ಸೇವಿಸಿ ಕೃತಾರ್ಥರಾಗುತ್ತಾರೋ ಅವರು ಅತ್ಯುಚ್ಚ ಸುಖವನ್ನು ಪಡೆಯುತ್ತಾರೆ ಎಂದರೆ ಮೋಕ್ಷವೆಂಬ ನಾಲ್ಕನೆಯ ಪುರುಷಾರ್ಥ ಸೇವನೆಗೆ ಅರ್ಹರಾಗುತ್ತಾರೆ.

ಈ ಪುರುಷಾರ್ಥಗಳ ವಿಚಾರದಲ್ಲಿ ಕನ್ನಡದ ಆದಿಕವಿ ಪಂಪನು ತನ್ನ ಆದಿ ಪುರಾಣದಲ್ಲಿ ಒಂದೆಡೆ ತುಂಬ ಕಾವ್ಯಮಯವಾಗಿ ಉದ್ಗರಿಸಿದ್ದಾನೆ -

ಧರ್ಮಾರ್ಥ ಕಾಮ ಮೆಂಬಿವು ।

ಧರ್ಮಾರ್ಥಿ ಜನಕ್ಕೆ ನೆರೆದ ನೆಮ್ಮೆ, ಅಂತವರೊಳ್ ॥

ಧರ್ಮಂ ಪ್ರಧಾನಂ, ಅರ್ಥಂ ।

ಧರ್ಮಾಂಘ್ರಿಪ ಫಲಂ, ಅದಕ್ಕೆ ರಸಮದು ಕಾಮಂ ॥ (ಆ.ಪು. ೧೦-೩೦)

- ಎಂದರೆ ಧರ್ಮ, ಅರ್ಥ, ಕಾಮ ಎಂಬೀ ಮೂರು ಪುರಷಾರ್ಥಗಳು ಧರ್ಮ ಸಾಧನೆಯ ಅಪೇಕ್ಷೆಯುಳ್ಳ

ಜನಕ್ಕೆ ಸಮಗ್ರ ಆಧಾರ. ಮತ್ತು ಈ ಮೂರರಲ್ಲಿ ಧರ್ಮವೇ ಪ್ರಧಾನವಾದುದು; ಅರ್ಥವು ಧರ್ಮವೆಂಬ ವೃಕ್ಷವು ಕೊಡುವ ಹಣ್ಣು ; ಈ ಹಣ್ಣಿನ ರಸವೇ ಕಾಮ! ಈ ಸುಂದರ ರೂಪಕದ ಉಕ್ತಿ ಈ ಮೂರು ಪುರುಷಾರ್ಥಗಳ ಪರಸ್ಪರ ಸಂಬಂಧವನ್ನು ಮನೋಜ್ಞವಾಗಿ ಸ್ಪಷ್ಟಪಡಿಸಿದೆಯಲ್ಲವೆ ? ಈ ಮೂರರಲ್ಲಿ ಧರ್ಮವೇ ಪ್ರಧಾನ ಪುರುಷಾರ್ಥವಾಗಿದ್ದು ಧರ್ಮ ಮೂಲಕವಾಗಿಯೇ ಅರ್ಥ- ಕಾಮಗಳನ್ನು ಸಾಧಿಸಬೇಕು. ಇಲ್ಲಿ ನಾಲ್ಕನೆಯ ಮೋಕ್ಷ ಎಂಬ ಪುರುಷಾರ್ಥದ ಹೆಸರನ್ನು ಪಂಪ ಎತ್ತಿಲ್ಲ, ಜನ್ಮಜನ್ಮಾಂತರಗಳನ್ನು ದಾಟಿ ಕೊನೆಗೆ ಪಡೆಯುವ 'ತೀರ್ಥಂಕರ ಸ್ಥಿತಿ' ವೈದಿಕ ಪರಂಪರೆಯ ಮೋಕ್ಷ ಸ್ಥಿತಿಗಿಂತ ಮಿಗಿಲಾದುದೆಂಬ ಕಲ್ಪನೆ ಆತನದಿರಬಹುದು. ಧರ್ಮಾರ್ಥ ಕಾಮಗಳ ಸಾಧನೆ ಸಿದ್ಧಿಗಳಲ್ಲೇ ಮೋಕ್ಷ ಸುಖವಿದೆ ಎಂಬುದನ್ನು 'ರಸ' ಎಂಬ ಪದದಿಂದ ಕವಿ ಸೂಚಿಸಿರಬಹುದು. ರಸೋವೈಸಃ ಪರಮಾತ್ಮನು ರಸರೂಪಿಯೇ ಎಂಬ ಉಪನಿಷದ್ವಾಕ್ಯದಲ್ಲಿಯ 'ರಸ' ಪದದ ನೆಲೆಗೆ ಪಂಪ ಕವಿ ಬಳಸಿದ 'ರಸ' ಪದವೂ ನಿಲ್ಲಬಹುದಲ್ಲವೆ ?

# ಉಪನಿಷತ್ತುಗಳ ಎರಡು ಪಕ್ಷಿಗಳ ದೃಷ್ಟಾಂತ ಕಥೆ - ಶ್ರೀ ಅರವಿಂದ ವಾಣಿ

**ಎಸ್.ಆರ್. ಮಳಗಿ**

ಉಪನಿಷತ್ತುಗಳ ಎರಡು ಪಕ್ಷಿಗಳ ದೃಷ್ಟಾಂತ ಕಥೆಯನ್ನು ಸ್ವಾಮಿ ವಿವೇಕಾನಂದರು ಆಗಾಗ ಹೇಳುತ್ತಿದ್ದುದನ್ನು ಶ್ರೀ ಅರವಿಂದರು ಸ್ಮರಿಸುತ್ತಾರೆ. ಆ ಕಥೆ ಹೀಗಿದೆ :-

ಮರದಲ್ಲಿಯ ಎರಡು ಪಕ್ಷಿಗಳಲ್ಲಿ ಕೆಳಗಡೆಯ ಪಕ್ಷಿ ಅಲ್ಲಿಯ ಸಿಹಿ ಹಣ್ಣುಗಳನ್ನು ಸವಿಯುವುದರಲ್ಲಿಯೇ ಮಗ್ನವಾಗಿ, ಮೇಲ್ಗಡೆಯಲ್ಲಿರುವ - ತನ್ನ ಆತ್ಮವೇ ಆಗಿರುವ ಆ ಸಹಚರಿ ಪಕ್ಷಿಯನ್ನು ಮರೆತೇ ಬಿಡುತ್ತಿತ್ತು. ಕಹಿ ಹಣ್ಣುಗಳನ್ನು ತಿನ್ನುವಾಗ ಬೆಚ್ಚಿಬಿದ್ದು, ತನ್ನ ಆ ಸಹಚರಿ ಪಕ್ಷಿಯನ್ನು ಮತ್ತೆ ನೋಡುತ್ತಿತ್ತು. ಈ ಕಥೆ ವೈಯಕ್ತಿಕ ಆತ್ಮೋದ್ಧಾರದ ಬೋಧೆಗೆ ಸಂಬಂಧಿಸಿದ್ದು, ಸಾಂಸಾರಿಕ ಜೀವಿಗಳು ಇಹದ ಜೀವನದ ಸುಖ-ಭೋಗದಲ್ಲಿ ಮುಳುಗಿರುವಾಗ, ಮೇಲಿರುವ ಪರಮಾತ್ಮನು ತಮ್ಮೊಳಗಿನ ಜೀವಾತ್ಮದ ಅತ್ಯುಚ್ಚ ಸ್ವರೂಪವೆಂಬುದನ್ನೇ ಮರೆತು ಬಿಟ್ಟಿರುತ್ತಾರೆ. ಈ ಜಗದ ಮೋಹ-ಮಾಯೆಗಳೇ ಇದಕ್ಕೆ ಕಾರಣ. ಈ ಮೋಹ-ಮಾಯೆಗಳನ್ನು ಕಳೆದುಕೊಳ್ಳಲು ಕಷ್ಟ-ಸಂಕಷ್ಟಗಳ ಕಹಿ ಸವಿಯುವ ಕಾಲ ಬಂದೇ ಬರುವುದು. ಆಗ ಸಂಸಾರದ ಮೋಹ ಮಾಯೆ ತೊಲಗಿ, ನೈಜವಾದ ತನ್ನರಿವು ಉಂಟಾಗುತ್ತದೆ. ಹೀಗೆ ವಿವರಿಸುತ್ತ, ಈ ಕಥೆ ರಾಷ್ಟ್ರದ ಉನ್ನತ್ತಿಗೂ ಅನ್ವಯಿಸುವುದನ್ನು ಶ್ರೀ ಅರವಿಂದರು ನಮ್ಮ ಗಮನಕ್ಕೆ ತಂದು ಕೊಡುತ್ತಾರೆ. ಭಾರತೀಯರಾದ ನಾವು ಇಂದು ವಿದೇಶೀಯರ ಸಂಸ್ಕೃತಿ-ನಾಗರಿಕತೆಗಳಿಗೆ ಮಾರು ಹೋಗಿದ್ದೇವೆ. ನಮ್ಮಲ್ಲಿದ್ದ ಶ್ರೇಷ್ಠವಾದುದೆಲ್ಲವನ್ನೂ ತೊರೆದು, ನಮ್ಮ ಮನಸ್ಸು ಇಂದು ದಾರಿ ತಪ್ಪಿದಂತೆನಿಸಿದೆ. ಶಾಲೆ-ಕಾಲೇಜುಗಳಲ್ಲಿ ಪಾಶ್ಚಾತ್ಯ ರೀತಿಯ ಶಿಕ್ಷಣ ಪದ್ಧತಿಯೇ ರೂಢಿಗೊಳ್ಳುತ್ತಿದೆ. ಈ ವಿದೇಶೀಯ ಶಿಕ್ಷಣ ಪದ್ಧತಿ ನಮ್ಮ ಮನ-ಬುದ್ಧಿಗಳನ್ನು ಬಂಧಿಸಿದೆ. ಎಂಥ ಅಸಹಾಯ ಸ್ಥಿತಿ ! ನಮ್ಮ ಪರಂಪರೆಯ ಜೀವನ ವ್ಯವಸ್ಥೆಯ ಎಷ್ಟೋ ಉತ್ತಮವಾದುದನ್ನು ನಾವೇ ಕೆಡಿಸಿ ಹಾಕುತ್ತಿದ್ದೇವೆ. ನಮ್ಮ ಸ್ವಾವಲಂಬನಾ ಶಕ್ತಿ ಕುಗ್ಗಿಹೋಗಿದೆ.

ಆದರೆ, ನಮಗೆ ಅರಿವಿಲ್ಲದಂತೆಯೆ ನಮ್ಮ ಇಂದಿನ ಕಷ್ಟ-ಸಂಕಷ್ಟಗಳ ಯಾತನೆಯೇ ನಮ್ಮ ಈ ಮೋಹ- ಮಾಯಾ ಜಾಲವನ್ನು ಕಿತ್ತೊಗೆಯಲು ನೆರವೀಯಬಲ್ಲದು. ನಾವಿಂದು ಮೇಲಕ್ಕೆ ಗಮನ ಹರಿಸಿ, ಅಲ್ಲಿ ಕುಳಿತಿರುವ ಉಜ್ವಲ ಪಕ್ಷಿಯನ್ನು - ಆ ನಮ್ಮ ಆತ್ಮವನ್ನು ಲಕ್ಷಿಸಬೇಕು. ನಮ್ಮ ನೈಜ ಸ್ವರಾಜ್ಯ- ಸ್ವಾತಂತ್ರ್ಯಗಳು ನಮ್ಮೊಳಗೇ ಇರುವುದನ್ನು ಶೋಧಿಸಿ ಕಂಡುಕೊಳ್ಳಲು ಯತ್ನಿಸಬೇಕು. ಅವುಗಳನ್ನು ಪಡೆಯುವುದು ನಮ್ಮ ಕೈಯಲ್ಲೇ ಇದೆಯೆಂಬುದನ್ನು ಮನಗಾಣಬೇಕು. ಉಪನಿಷತ್ತಿನ ಎರಡು ಪಕ್ಷಿಗಳ ದೃಷ್ಟಾಂತ ಕಥೆಯ ಧ್ವನಿಯನ್ನು ಶ್ರೀ ಅರವಿಂದರು ಹೀಗೆ ನಮ್ಮ ಹೃದಯಕ್ಕೆ ಮುಟ್ಟಿಸಿದ್ದಾರೆ.

15-01-1995

# ಚಿಂತನ

# ಜಾಗತಿಕ ಐಕ್ಯತೆ

## ಶ್ರೀ ಅರವಿಂದ ವಾಣಿ

ಎಸ್. ಆರ್. ಮಳಗಿ

ಮಾನವನ ಜಾಗತಿಕ ಐಕ್ಯತೆಯ ಕನಸು ಬಹು ಹಳೆಯ ಕಾಲದ್ದು. ಕ್ರಿಸ್ತ ಪೂರ್ವದ ವೇದೋಪನಿಷತ್ತುಗಳ ಕಾಲದಷ್ಟು ಪುರಾತನದ್ದು. 'ಸರ್ವೇ ಜನಾಃ ಸುಖಿನೋ ಭವಂತು'- ಎಂಬ ಘೋಷಣೆ ಸ್ಫುರಿಸಿದ್ದು ವೈದಿಕ ಸಂಸ್ಕೃತಿಯಿಂದಲೇ. ಐಕ್ಯತೆಯ ಈ ಕನಸು ಮತ್ತೊಮ್ಮೆ ಸ್ಫುರಿಸಿದ್ದು 18ನೆಯ ಶತಮಾನದ ಫ್ರೆಂಚ್ ಮಹಾ ಕ್ರಾಂತಿಯ ಕಾಲದಲ್ಲಿ. **Liberty, Equality and Fraternity** – ಸ್ವಾತಂತ್ರ್ಯ, ಸಮತಾ ಭಾವ ಹಾಗೂ ಭ್ರಾತೃತ್ವ - ಈ ಮೂರು ಪರಸ್ಪರ ಸಂಬಂಧವುಳ್ಳ ತತ್ವಗಳ ತಳಹದಿಯ ಮೇಲೆ ಮಾನವ ಸಮಾಜದ ಪುನಃ ಸೃಷ್ಟಿಯಾಗಬೇಕೆಂದು ಆಗ ಸಾರಲಾಯ್ತು. ಆದರೆ ನಂತರ ಎರಡು ಜಾಗತಿಕ ಮಹಾ ಯುದ್ಧಗಳು ನಡೆದು ಹೋದವು. ರಶಿಯಾದ ಮಹಾ ಕ್ರಾಂತಿ ಭುಗಿಲೆದ್ದು ಒಂದು ಶತಮಾನ ಕಳೆಯುವ ಮುನ್ನವೇ ಅದು ಕಟ್ಟಿದ ಕಮ್ಯುನಿಜಂ - ಸಮತಾವಾದ ಕುಸಿದು ಬಿತ್ತು. 'ರಾಷ್ಟ್ರ ಸಂಘ' -'League of Nations" ಹುಟ್ಟಿ ಸತ್ತಿತು. ಅದರ ಸ್ಥಳದಲ್ಲಿ ರಾಷ್ಟ್ರಗಳ ಒಕ್ಕೂಟ ಸಂಸ್ಥೆ " **United Nations Organization** " ಈ ದಿಶೆಯಲ್ಲಿ ಈಗ ಕಾರ್ಯ ನಿರ್ವಹಿಸುತ್ತಿದೆ. ಮಾನವ ಮನಸ್ಸಿನ ಈ ಯಾವ ಪ್ರಯತ್ನಗಳಿಗೂ ಮಾನವ ಐಕ್ಯತೆಯ ಕನಸು ಇನ್ನೂ ನನಸಾಗಿಲ್ಲ. ಸ್ವಾತಂತ್ರ್ಯ, ಸಮತಾ ಭಾವ ಹಾಗೂ ಭ್ರಾತೃತ್ವ - ಈ ಮೂರರಲ್ಲಿ ಯಾವೊಂದು ಧ್ಯೇಯವೂ ಮನುಷ್ಯನ ಕೈಗೆ ಎಟುಕಿಲ್ಲ ಎಂಬುದು ಶ್ರೀ ಅರವಿಂದರ ಖಚಿತ ವಿಚಾರ. ಸ್ವಾತಂತ್ರ್ಯ ಹಾಗೂ ಸಮತಾ ಭಾವಗಳು ಬಾಹ್ಯದಲ್ಲಿ ತೋರುವ ಯಾಂತ್ರಿಕ ಹಾಗೂ ಸುಳ್ಳಿನ ಸ್ವಾತಂತ್ರ್ಯ - ಸಮತಾ ಭಾವಗಳಾಗಿವೆ. ಭ್ರಾತೃತ್ವವಂತೂ ವ್ಯಾವಹಾರಿಕ ತತ್ವವೇ ಅಲ್ಲವೆಂದು ಹೀಗಳೆಯಲ್ಪಟ್ಟಿದೆ. ಭ್ರಾತೃತ್ವಕ್ಕೆ ಬದಲಾಗಿ ಸಮಾನ ಪಾಲುಗಾರಿಕೆಯ ತತ್ವವೊಂದನ್ನು ಸೂಚಿ-ಸಲಾಗಿದೆ. ಇದು ತೋರಿಕೆಯ ಹಾಗೂ ಯಾಂತ್ರಿಕ ರೀತಿ-ಯದೇ ಎಂದು ಶ್ರೀ ಅರವಿಂದರ ಸುಸ್ಪಷ್ಟ ವಾಣಿ ! ಇದಕ್ಕೆಲ್ಲ ಕಾರಣವೇನೆಂದರೆ, ಬೌದ್ಧಿಕವೆಂದು ಹೇಳಿಕೊಳ್ಳುವ ಈ ಯುಗದಲ್ಲಿ ಆಧುನಿಕ ಮಾನವೀಯತಾ ಕಲ್ಪನೆಯು ಮಾನವ ಧರ್ಮದ ನೈಜ ಸ್ವರೂಪವಾದ ಆತ್ಮಧರ್ಮದ ಸತ್ವವನ್ನೇ ಮರೆ ಮಾಡಿ ಬಿಟ್ಟಿದೆ. ಮಾನವನ ಕೀಳು ಸ್ವಾರ್ಥ ಭಾವ ಹಾಗೂ ಅಹಂಕಾರ ಪ್ರವೃತ್ತಿಗಳನ್ನೇ ಅದು ಪ್ರೇರಿಸುತ್ತಿದೆ, ಆತನ ಅಂತರಾತ್ಮವನ್ನಲ್ಲ. ರಾಜಕೀಯ ಹಾಗೂ ಸಾಮಾಜಿಕ ಸಂಸ್ಥೆಗಳಲ್ಲಿ ಕ್ರಾಂತಿಯನ್ನೆಸಗುವ ಪ್ರಯತ್ನಕ್ಕೆ ಮಾತ್ರ ಇಂದಿನ ಮನುಷ್ಯನ ಸಾಹಸವು ಸೀಮಿತವಾಗಿದೆ. ಈ ಸಂಸ್ಥೆಗಳು ಮಾನವ ಪ್ರಾಣಿಯ ಸರ್ವ ಸಾಮಾನ್ಯ ಮನೋಭಾವನೆಗಳನ್ನೂ, ವಿಚಾರಗಳನ್ನೂ ವ್ಯಾವಹಾರಿಕವಾಗಿ ಮಾರ್ಪಡಿಸಲು ಹೆಣಗುತ್ತಿವೆ. ಇದರಿಂದ ಮಾನವ ಜನಾಂಗದ ಮೇಲೆ ಅಷ್ಟೊಂದು ಪರಿಣಾಮವಾಗದು. ಮಾನವನ ಆಂತರಂಗಿಕ ಸ್ವಭಾವ ಮತ್ತು ಅದಕ್ಕನುಗುಣವಾದ ಬಾಹ್ಯ ಜೀವನ ರೀತಿಯ ಪರಿವರ್ತನೆ ಇವುಗಳ ತಳಹದಿಯ ಮೇಲೆ ಸ್ವಾತಂತ್ರ್ಯ,

ಸಮತಾ ಭಾವ ಹಾಗೂ ಭ್ರಾತೃತ್ವಗಳು ಸ್ಥಾಪಿತವಾಗಬೇಕು. ಈ ಮೂರು ತತ್ವಗಳು ಆತ್ಮದ ಅಧಿ ದೈವತಗಳು. ಸಮಾಜದ ಬಾಹ್ಯ ಯಾಂತ್ರೀಕರಣದ ಮೂಲಕ ಇವುಗಳನ್ನು ಸಾಧಿಸುವುದಾಗದು. ಮನುಷ್ಯನು ವೈಯಕ್ತಿಕ ಹಾಗೂ ಸಾಮುದಾಯಿಕ ಅಹಂಕಾರದಲ್ಲಿ ಜೀವಿಸುವವರೆಗೆ ಇವು ಕನಸಿನ ಗಂಟಾಗಿಯೇ ಇರುವವು. ಅಹಂಕಾರವು ಹಕ್ಕಿನಿಂದ ಸ್ವಾತಂತ್ರ್ಯವನ್ನೂ, ಸಮತೆಯನ್ನೂ ಕಸಿದುಕೊಳ್ಳಲಿಚ್ಛಿಸಿದರೆ, ಆ ಸ್ವಾತಂತ್ರ್ಯ ಮತ್ತು ಸಮತೆಗಳು ಸ್ಪರ್ಧೆ-ಹೋರಾಟಗಳ ಮೂಲಕ ಯಾಂತ್ರಿಕ ಹಾಗೂ ಕೃತ್ರಿಮ ಸಮಾಜವೊಂದನ್ನು ರೂಪಿಸುತ್ತವೆ. ಕೆಲ ಕಾಲದಲ್ಲಿಯೇ ಈ ಮಾನವ ಸಮಾಜವು ಸ್ವಾತಂತ್ರ್ಯ - ಸಮತಾ ಭಾವಗಳೆರಡನ್ನೂ ಕಳೆದುಕೊಳ್ಳುತ್ತದೆ. ಅಹಂಕಾರವಿದ್ದಲ್ಲಿ ಭ್ರಾತೃತ್ವಕ್ಕೆ ಆಸ್ಪದವೇ ಇಲ್ಲ. ಭ್ರಾತೃತ್ವವು ಮಾನವೀಯತಾ ಕಲ್ಪನೆಯ ಈ ತ್ರಿವಿಧ ತತ್ವ ಸಿದ್ಧಿಗೆ ಬೀಗದ ಕೈಯಾಗಿದೆ. ಭ್ರಾತೃತ್ವವು ಆತ್ಮದ ಗುಣ. ಅದರಿಂದಲೇ ನಿಜವಾದ ಸ್ವಾತಂತ್ರ್ಯ - ಸಮತಾ ಭಾವಗಳು ಸ್ಫುರಿಸುವವು. ಈ ಸತ್ಯದ ಅರಿವು ಪಡೆದು, ಆತ್ಮ ಜಾಗೃತಿ ಹೊಂದಿ, ಆತ್ಮ ಶಕ್ತಿಯಿಂದ ಬಾಳಿ ಬದುಕುವ ಪ್ರಯತ್ನವೇ ಮಾನವ ಧರ್ಮದ ಇಂಗಿತಾರ್ಥ. ಇದನ್ನು ಮಾನವನು ತನ್ನೊಳಗೆ ಅಳವಡಿಸಿಕೊಂಡಾಗಲೇ ಮಾನವ ಧರ್ಮವು ಇಡಿಯ ಮಾನವ ಜನಾಂಗದ ಜೀವನದಲ್ಲಿ ಸಿದ್ಧಿಗೊಳ್ಳುತ್ತದೆ. ಆಗ ಮಾನವನ ಐಕ್ಯತೆಗೆ ದಾರಿ ಗೋಚರಿಸುತ್ತದೆ ಎಂಬುದು ಶ್ರೀ ಅರವಿಂದರ ವಿಚಾರಧಾರೆ.

# ಜೀವನ ಸುಖ - ಶ್ರೀ ಅರವಿಂದ ವಾಣಿ

**ಎಸ್.ಆರ್.ಮಳಗಿ**

ಜೀವನದಲ್ಲಿ ಸುಖ ಯಾರಿಗೆ ಬೇಡ ? ಎಲ್ಲರೂ ಬಯಸುವುದು ಸುಖವನ್ನೇ. ಆದರೆ ಅದು ಎಂಥ ಸುಖ ? ಸಾಮಾನ್ಯ ಲೌಕಿಕ ಅಥವಾ ಪ್ರಾಪಂಚಿಕ ಸುಖವೆ ? ಅದಲ್ಲ ಎನ್ನುತ್ತಾರೆ ಶ್ರೀ ಅರವಿಂದರು ಹಾಗೂ ಶ್ರೀ ಮಾತೆಯವರು. ಅವರು ಹೇಳುವುದು ಆತ್ಮಸುಖ, ಅಂತರಾತ್ಮದಿಂದ ಹೊಮ್ಮುವ ಸುಖ. ಸಾಮಾನ್ಯ ಲೌಕಿಕ ಸುಖ ಹುಟ್ಟುವುದು ಮಾನವನ ಪ್ರಾಣಮಯ ಕೋಶದಲ್ಲಿ ಮತ್ತು ಮನೋಮಯ ಕೋಶದಲ್ಲಿ. ಆದು ಅಶುದ್ಧ ಹಾಗೂ ಅಶಾಶ್ವತ. ಆತ್ಮಸುಖ ಪ್ರಶಾಂತ : ಸದಾ ನಗುನಗುತ್ತಿರುವುದು ಅದರ ಗುಣ ಧರ್ಮ. ಅದರ ಸ್ಥಾನ ಮಾನವ ಹೃದಯ, ಭಗವಂತನಿರುವುದು ಹೃದಯದಲ್ಲಿಯೇ. 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ'! ಇದು ಭಗವದ್ಗೀತೆಯ ಉಕ್ತಿ. ಹೃದಯದ ಈ ಸುಖಕ್ಕೆ ಯಾವುದರ ಪೀಡೆಯೂ ಇಲ್ಲ. ಈ ನೈಜ ಸುಖವನ್ನು ಕಡೆಗಣಿಸಿ ಮನದ ಮತ್ತು ಪ್ರಾಣದ ಸುಖಕ್ಕೆ ಒಲಿಯಕೂಡದು.

ಕೊನೆ ಬಾಳ ಬಲ್ಲ ನೈಜ ಸುಖ ಪಡೆಯಲು ಒಂದೇ ಒಂದು ದಾರಿಯಿದೆ. ಅದಾವುದೆಂದರೆ ಭಗವಂತನ ಅನುಗ್ರಹದ ಮೇಲೆ ಮಾತ್ರ ಅವಲಂಬಿಸುವುದು. ಇನ್ನಾರ ಅನುಗ್ರಹಕ್ಕೂ ಪರದಾಡಬೇಕಿಲ್ಲ.

ಮನದ ಆಲೋಚನೆ ಹಾಗೂ ಪ್ರಾಣದ ಹಂಬಲಗಳಲ್ಲಿ ಸದಾ ನಿರಾಶೆ ಸುಳಿದಾಡುತ್ತಿರುತ್ತದೆ. ಅದನ್ನು ತಡೆಗಟ್ಟಿ, ಆತ್ಮಾನಂದದ ಆಶಾವಾದಿಯಾಗಿರುವುದೇ ಜೀವನದ ಸಾರ್ಥಕ್ಯ. ಹಾಗೆಯೆ, ಭಗವಂತನಿಗೆ ನಮ್ಮನ್ನೂ, ನಮ್ಮದೆಲ್ಲವನ್ನೂ ಸಮರ್ಪಿಸುವಲ್ಲಿಯೇ ಪರಮ ಸುಖ. ತೇನ ತ್ಯಕ್ತೇನ ಭುಂಜೀಥಾಃ ಎಂದು ಉಪನಿಷತ್ತು ಹೇಳುತ್ತದೆ. ಭಗವಂತನು ಕೊಟ್ಟುದನ್ನು ಅವನಿಗೆ ಅರ್ಪಿಸಿ, ಅವನ ಪ್ರಸಾದವೆಂದೇ ಭುಂಜಿಸಬೇಕು. ಹಾಗೆ ಮಾಡಿದಾಗ ಭಗವಂತನು ಸದಾ ನಮ್ಮೊಂದಿಗೇ ಇರುತ್ತಾನೆ. ಅದಕ್ಕಿಂತ ಹೆಚ್ಚಿನ ಸುಖ ಏನಿದೆ ?

ನಿಸ್ವಾರ್ಥವಾದ, ವ್ಯಾವಹಾರಿಕ ಲೆಕ್ಕಹಾಕದ ಚಲನೆ ಅಂತರಾತ್ಮದ್ದು. ಅದು ತುಂಬ ಸುಂದರ ರೂಪದ್ದು. ನಾವು ಮನದ ಬೌದ್ಧಿಕ ಚತುರತೆ, ಭ್ರಷ್ಟಾಚಾರ ಮತ್ತು ಲೆಕ್ಕ ಹಾಕುವ ಕೈಚಳಕದಲ್ಲಿ ತೊಡಗಿದಂತೆಲ್ಲ ಆಂತರಾತ್ಮಿಕ ಚಲನೆ ಕಡಮೆಯಾಗುತ್ತ ಹೋಗುತ್ತದೆ. ಉದಾಹರಣೆಗೆ,- ಒಂದು ಗುಲಾಬಿ ಹೂ ಅರಳುವಾಗ ಸ್ವಯಂಸ್ಫೂರ್ತಿಯಿಂದ ಅರಳುವುದು. ಅದು ಲೆಕ್ಕಹಾಕುವುದಿಲ್ಲ. ಅರಳುವುದರಿಂದ ಮತ್ತು ಸುಗಂಧ ಬೀರುವುದರಿಂದ ತನಗಾಗಿ ಅದು ಏನೊಂದನ್ನೂ ಬಯಸುವುದಿಲ್ಲ. ತನ್ನ ಇರುವಿಕೆಯ ಸಹಜ ಆನಂದದಲ್ಲಿ ಸ್ವಯಂ ಪ್ರೇರಣೆಯಿಂದ ಚೆಲುವಾಗಿ ಅರಳುತ್ತದೆ, ಇನಿಗಂಪು ಬೀರುತ್ತದೆ. ಸುತ್ತಣ ವಾತಾವರಣಕ್ಕೆ ಆನಂದವೀಯುತ್ತದೆ. ಇತರರಿಂದ ಪಡೆಯುವ ಸುಖಕ್ಕಿಂತ, ಇತರರಿಗೆ ಕೊಡುವ ಸುಖದಿಂದಲೇ ನಾವು ಪರಮ ಸುಖಿಗಳು ಎಂಬ ಪಾಠವನ್ನು ಗುಲಾಬಿ ಹೂ ನಮಗೆ ಕಲಿಸುತ್ತದೆ. ಅದೇ ಒಬ್ಬ ಮಾನವ ಜೀವಿಯನ್ನು ನೋಡಿರಿ- ಕೆಲವೇ ಅಪವಾದಗಳನ್ನು ಬಿಟ್ಟರೆ, ಅವನ ಮನಸ್ಸು ಯಾವುದೇ ಕಾರ್ಯಕ್ಕೆ ತೊಡಗುವ ಮುನ್ನವೆ, ತನ್ನ ಸೌಂದರ್ಯ, ಚತುರತೆಯ ಲಾಭಕ್ಕಾಗಿ ಹಾತೊರೆಯುತ್ತಾನೆ ! ಇದರಿಂದ, ತನಗೆ ದೊರೆಯುವುದೇನು

ಎಂಬ ಬಗ್ಗೆ ಲೆಕ್ಕಾಚಾರಕ್ಕೆ ತೊಡಗುತ್ತಾನೆ ! ಕೊನೆಯ ಪಕ್ಷ, ಜನರ ಹೊಗಳಿಕೆಯ ಲಾಭವನ್ನಾದರೂ ಬಯಸುತ್ತಾನೆ. ಆದ್ದರಿಂದ ಆಂತರಾತ್ಮಿಕ ದೃಷ್ಟಿಯಿಂದ ನೋಡಿದಲ್ಲಿ ಮಾನವ ಜೀವಿಗಿಂತ - ಗುಲಾಬಿ ಹೂ ಮೇಲಲ್ಲವೆ ? ಎನ್ನುತ್ತಾರೆ ಶ್ರೀ ಮಾತೆಯವರು.

ಈ ಸೃಷ್ಟಿ ಪರಮಾತ್ಮನ ಲೀಲೆ. ಅಂತೆಯೆ ಅದು ಆನಂದಮಯ ಸೃಷ್ಟಿ ಎನ್ನುತ್ತಾರೆ ಶ್ರೀ ಅರವಿಂದರು. ಪ್ರತಿಯೊಬ್ಬ ಮಾನವನೂ ಪರಮಾತ್ಮನೊಂದಿಗೆ ಸದಾ ನಕ್ಕು ನಲಿದಾಡುವುದನ್ನು ಕಲಿತುಕೊಳ್ಳಬೇಕು. ಆತನೊಂದಿಗೆ ಆಟವಾಡುತ್ತಿರುವುದೇ ನೈಜ ಜೀವನ, ಅದೇ ಪರಮ ಸುಖ !

10-01-2001

# ಭಗವಂತನ ಸಂಕಲ್ಪ - ಶ್ರೀ ಅರವಿಂದ ವಾಣಿ

**ಎಸ್.ಆರ್. ವಳಗಿ**

ನಮ್ಮ ಜೀವನದ ದೈನಂದಿನ ಕಾರ್ಯಕಲಾಪಗಳಲ್ಲಿ ಅನೇಕ ಬಗೆಯ ಸಂಗತಿಗಳು ಮತ್ತು ಘಟನೆಗಳು ಪ್ರತಿನಿತ್ಯ ಪ್ರತಿಕ್ಷಣ ಜರಗುವವಷ್ಟೆ ? ಇವುಗಳಲ್ಲಿ ಹಲವಾರು ಸಲ ನಾವು ಎಡಹುವುದುಂಟು, ಬೀಳುವುದುಂಟು, ಬಿದ್ದರೂ ಏಳುವುದೂ ಉಂಟು. ಹೀಗೆಯೇ ನಮ್ಮ ಬಾಳ ದಾರಿ ಸಾಗಿರುತ್ತದೆ. ಒಮ್ಮೆ ಸೋಲುತ್ತೇವೆ, ಒಮ್ಮೆ ಗೆಲ್ಲುತ್ತೇವೆ ಎಂಬುದಾಗಿಯೂ ನಮ್ಮ ಮನಸ್ಸಿಗೆ ಅನಿಸುತ್ತಿರುತ್ತದೆ. ಸೋತಾಗ, ಮನಸ್ಸಿಗೆ ಹಚ್ಚಿಕೊಂಡು ಕುಗ್ಗುತ್ತೇವೆ. ಮತ್ತು ಆಗ ಏನೇನೋ ಕುಂಟು ನೆವಗಳನ್ನು ನಮಗೇ ಹೇಳಿಕೊಳ್ಳುತ್ತ, ನಾವು ಮಾಡಿದ್ದೆಲ್ಲ, ಆಡಿದ್ದೆಲ್ಲ ಬಹು ಮಟ್ಟಿಗೆ ಸರಿಯೇ ಇತ್ತೆಂದೂ ಸಾಧಿಸಿಕೊಳ್ಳುತ್ತೇವೆ. ಗೆದ್ದಾಗ, ಉಬ್ಬುಬ್ಬಿ ಹಿಗ್ಗುತ್ತೇವೆ ಮತ್ತು ನಮ್ಮ ಬೆನ್ನನ್ನು ನಾವೇ ಚಪ್ಪರಿಸಿಕೊಳ್ಳುತ್ತೇವೆ. ನಮ್ಮ ಬುದ್ಧಿ ಚಾತುರ್ಯದ ಬಗ್ಗೆ ನಾವೇ ಹೆಮ್ಮೆ ಪಟ್ಟುಕೊಂಡು ಬೀಗುತ್ತಿರುತ್ತೇವೆ. ಇದು ಸಾಮಾನ್ಯವಾಗಿ ಎಲ್ಲರ ಅನುಭವಕ್ಕೆ ಬರುವ ವಿಷಯ, ಎಲ್ಲರೂ ಬಲ್ಲ ವಿಚಾರ.

ಆದರೆ ಈ ಬಗ್ಗೆ ಈ ಶತಮಾನದ ಮಹಾಯೋಗಿ ಶ್ರೀ ಅರವಿಂದರು ತಿಳಿಸುವ ತತ್ವವು ಘನವಾದುದೆಂದೇ ಹೇಳಬೇಕು. ಅವರು ಘೋಷಿಸುವ ಆ ತತ್ವವಾವುದೆಂದರೆ, - ಮಾನವ ಜೀವನದಲ್ಲಿ ನಡೆಯುವುದೆಲ್ಲದರಲ್ಲಿ ಸೋಲೆಂಬುದೇ ಇಲ್ಲ ! ಸೋಲು-ಗೆಲುವುಗಳ ಕಲ್ಪನೆ ನಮಗುಂಟಾಗುವುದು ನಾವು ನಮ್ಮ ಆಂತರಿಕ ಮನಶ್ಚೇತನದಲ್ಲಿ ಸಮತೋಲನವನ್ನು ಕಳೆದುಕೊಂಡಾಗ. ಸೋಲಿರಲಿ, ಗೆಲುವಿರಲಿ ನಡೆಯುವುದೆಲ್ಲವೂ ಆ ಭಗವಂತನ ಇಚ್ಛೆ ಅಥವಾ ಸಂಕಲ್ಪ ಮಾತ್ರದಿಂದ. ಅದೂ ಕೂಡ ಆತನ ಕೊನೆಯ ಸಂಕಲ್ಪವಲ್ಲ. ನಾವು ವಿಶ್ವದ ಸೂತ್ರಧಾರಿಯಾದ ಆ ಪ್ರಭುವಿನ ಕೈಯ ಉಪಕರಣಗಳು ಮಾತ್ರ. ನಮ್ಮನ್ನು ನಡೆಸುವ ಆತನ ಕಾರ್ಯಪಥದಲ್ಲಿ ನಮ್ಮ ಆ ಸೋಲು ಇಲ್ಲವೆ ಗೆಲುವು ಒಂದು ಹೆಜ್ಜೆ ಮಾತ್ರ. ಜೀವನದಲ್ಲಿ ನಡೆದ ಯಾವುದೇ ಘಟನೆ ನಮ್ಮ ಮುಂದಿರುವ ಗುರಿಗೆ ವಿರೋಧಕವೆನಿಸಿ, ಸೋಲೆನಿಸಿ, ಸಂಪೂರ್ಣವಾಗಿ ನಿರಾಕರಿಸುವಂಥದೇ ಎನಿಸಿದರೂ ಕೂಡ, ಅದೊಂದು ತೋರಿಕೆಯ ಸಂಗತಿಯೇ. ನಂತರದಲ್ಲಿ, ಜಗದೊಡೆಯ ಭಗವಂತನ ಆಡಳಿತ ಕಾರ್ಯದ ಒಟ್ಟಿನ ನಿರ್ವಹಣೆಯಲ್ಲಿ ಅದಕ್ಕೊಂದು ಯೋಗ್ಯ ಸ್ಥಾನವಿದ್ದೇ ಇದೆಯೆಂದು ಶ್ರೀ ಅರವಿಂದರು ಹೇಳುತ್ತಾರೆ.

ಇನ್ನೂ ಬಹಳಷ್ಟು ಬೆಳೆವಣಿಗೆ ಹೊಂದಬೇಕಾದ ಮಾನವ ಹಂತದ ನಮ್ಮ ಅರಿವು ಅರೆಕೊರೆಯದಾಗಿದ್ದು, ಅದರ ಬೆಳಕೂ ಮಂದವಾದುದು. ನಾವು ಮಾಡುವ ಯಾವೊಂದು ಕಾರ್ಯದ ಗುರಿಯಲ್ಲಾಗಲಿ, ಅದರ ರೀತಿಯಲ್ಲಾಗಲಿ ಎಲ್ಲಿಯೋ ತಪ್ಪಿರುತ್ತದೆ. ಇದರಿಂದಾಗಿ, ನಮ್ಮ ಕಾರ್ಯದಲ್ಲಿ ಒಮ್ಮೆ ಸೋಲು, ಒಮ್ಮೆ ಗೆಲುವು ಉಂಟಾದಂತೆ ಭ್ರಮೆಯಲ್ಲಿರುತ್ತೇವೆ. ಹೊರ ತೋರಿಕೆಯ ಈ ಸೋಲು - ಗೆಲುವುಗಳೆರಡೂ ನಮಗೆ ಪಾಠ ಕಲಿಸಿ, ಸರಿದಾರಿಗೆ ಹಚ್ಚುತ್ತವೆ. ಸೋಲುಂಟಾದಂತೆನಿಸಿದಾಗ,

ಕುಗ್ಗಬಾರದು, ಗೆಲುವುಂಟಾದೆನಿಸಿದಾಗ ಹಿಗ್ಗಬಾರದು. ಆ ಸೋಲು, ನಾವು ನಡೆದು ಬಂದ ದಾರಿಯಲ್ಲಿ ನಾವು ಮಾಡಿದ ತಪ್ಪಾವುದೆಂಬುದನ್ನು ತೋರಿಸಿಕೊಡಲು ಬಂದಿರುತ್ತದೆ. ಆ ಗೆಲುವು, ನಾವು ಮುಂದೆ ನಡೆಯಬೇಕಾಗಿರುವ ದಾರಿಯಲ್ಲಿ, ಹಿಗ್ಗಿನ ಭರದಲ್ಲಿ, ನಾವು ಅಡ್ಡದಾರಿ ಹಿಡಿಯಬಾರದೆಂದು ಎಚ್ಚರಿಕೆ ನೀಡಲು ಬಂದಿರುತ್ತದೆ. ಆದ್ದರಿಂದ, ಸೋಲು ಗೆಲುವುಗಳೆರಡರಲ್ಲೂ ಸಮಭಾವ ತಳೆಯುವುದನ್ನು ಕಲಿತುಕೊಳ್ಳಬೇಕು. ಸಮತಾಭಾವದ ಪರಿಪೂರ್ಣ ಕ್ರಿಯೆ ಎಲ್ಲದರ ಮೌಲ್ಯಗಳನ್ನು ಬದಲುಗೊಳಿಸುತ್ತದೆ. ಇಲ್ಲಿ ಸೋಲು-ಗೆಲುವುಗಳು ತಮ್ಮ ಅರ್ಥವನ್ನೇ ಕಳೆದುಕೊಳ್ಳುತ್ತವೆ. ಶುಭ-ಅಶುಭ, ಪ್ರಿಯ-ಅಪ್ರಿಯ ಎಂಬಂತಹ ಎಲ್ಲಾ ಸಂಗತಿಗಳಲ್ಲೂ ಭಗವಂತನ ಸಂಕಲ್ಪದಂತೆ ಮಾನವ ವ್ಯಕ್ತಿಯ ವಿಕಾಸ ಕ್ರಮವೊಂದು ನಡೆದಿರುತ್ತದೆ ಎಂಬುದು ಶ್ರೀ ಅರವಿಂದರ ಅಭಿಪ್ರಾಯ. ಭಗವದ್ಗೀತೆಯ 'ಸಮತ್ವಂ ಯೋಗ ಉಚ್ಯತೇ'-ಸಮತಾಭಾವ ತಳೆಯುವುದು ಒಂದು ಯೋಗವೇ ಆಗಿದೆ - ಎಂಬ ಉಕ್ತಿಯ ಮೇಲೆ ಹೊಸ ಬೆಳಕನ್ನು ಚೆಲ್ಲಿ, ಈ ಯೋಗ ಸಾಧನೆಯಿಂದುಂಟಾಗುವ ಆತ್ಮ ತೃಪ್ತಿ ಅನುಪಮ ಎನ್ನುತ್ತಾರೆ ಅವರು !

# ಶಿಕ್ಷಣವನ್ನು ಕುರಿತು

**ಎಸ್.ಆರ್.ಮಳಗಿ**

ಇಂದು ಪ್ರಚಲಿತವಿರುವ ಶಿಕ್ಷಣವು ಹೆಚ್ಚಾಗಿ ಮಾನಸಿಕ ಶಿಕ್ಷಣ, ಶುದ್ಧ ಮಾನವ ಬುದ್ಧಿಶಕ್ತಿಗೆ ಮಾತ್ರ ಸಂಬಂಧಿಸಿದ್ದು. ಆದರೆ ಶ್ರೀ ಮಾತಾರವಿಂದರ ಅಭಿಪ್ರಾಯದಲ್ಲಿ ಶಿಕ್ಷಣವು ಇಷ್ಟಕ್ಕೇ ನಿಲ್ಲಕೂಡದು. ಪ್ರತಿಯೊಬ್ಬ ವ್ಯಕ್ತಿಯಲ್ಲೂ ಘನವಾದ ಚೇತನವೊಂದು ಹುದುಗಿಕೊಂಡಿದೆ. ಅದು ಅಂತರಾತ್ಮಚೇತನ (Psychic Conciousness). ಇದು ಮಾನವನಿಗೆ ಇನ್ನೂ ವಿಶಾಲವಾದ, ಇನ್ನೂ ಉನ್ನತವಾದ ಜೀವನ ನಡೆಸಲು ನೆರವು ನೀಡುತ್ತದೆ. ಮಾನವ ಮನಸ್ಸು ಅರಿಯಲಾಗದ್ದನ್ನು ಮತ್ತು ಮಾಡಲಾಗದ್ದನ್ನು ಅಂತರಾತ್ಮ ಚೇತನವು ಅರಿಯಬಲ್ಲದು ಮತ್ತು ಮಾಡಬಲ್ಲದು. ಪ್ರತಿಯೊಬ್ಬ ವ್ಯಕ್ತಿಯ ಹೃದಯದಾಳದಲ್ಲಿ ಹೊಳೆ ಹೊಳೆಯುತ್ತಿರುವ ಬೆಳಕು ಇದು. ಮಾನವನ ಮನ, ಪ್ರಾಣ, ದೇಹಗಳ ದಪ್ಪ ಕವಚಗಳಿಂದ ಈ ಬೆಳಕು ಮುಚ್ಚಲ್ಪಟ್ಟಿರುತ್ತದೆ. ಈ ಕವಚಗಳನ್ನು ಭೇದಿಸಿ, ಅಂತರಾತ್ಮಪುರುಷನ ಬೆಳಕು ಮನ, ಪ್ರಾಣ, ದೇಹಗಳ ಬಾಹ್ಯ ಚೇತನಗಳ ಮೇಲ್ಭಾಗದಲ್ಲಿ ಬಂದು, ಅವುಗಳ ಅಂಧಕಾರ, ಮಲಿನತೆಗಳನ್ನು ಕಳೆಯುತ್ತಿರುವಾಗಲೆ ಆಂತರಾತ್ಮಿಕ ಶಿಕ್ಷಣ ಕಾರ್ಯ ಆರಂಭವಾಗುತ್ತದೆ. ಆದ್ದರಿಂದ ಶಿಕ್ಷಣ ಪದ್ಧತಿಯಲ್ಲಿ ಅಂತರಾತ್ಮ ಪುರುಷನ ಶೋಧನೆ ಹಾಗೂ ಆತನೊಡನೆ ಒಂದಾಗುವ ವಿಚಾರ ಇವು ವಿದ್ಯಾರ್ಥಿ ಕಲಿಯಬೇಕಾದ ವಿಷಯಗಳಾಗಿವೆ. ಈ ಶಿಕ್ಷಣ ಪದ್ಧತಿಯನ್ನು ಶ್ರೀಮಾತೆಯವರು 'ಸ್ವತಂತ್ರ ಪ್ರಗತಿ ಪದ್ಧತಿ' (Free Progress System) ಎಂದು ಕರೆದಿದ್ದಾರೆ. ಈ ಪದ್ಧತಿಯಲ್ಲಿ 'ಚೈತ್ಯ ಪುರುಷ' (Psychic being) ಅಥವಾ ಅಂತರಾತ್ಮನೇ ನಿಜವಾದ ಮಾರ್ಗದರ್ಶಕ. ಇಲ್ಲಿ ವಿದ್ಯಾರ್ಥಿ ತನ್ನಿಂದ ತಾನೇ ಕಲಿತುಕೊಳ್ಳಲು ಪ್ರೋತ್ಸಾಹಿಸಲ್ಪಡುತ್ತಾನೆ. ವಿದ್ಯಾರ್ಥಿ ತನ್ನ ವಿಷಯಗಳನ್ನು ತಾನೇ ಆಯ್ದುಕೊಂಡು ಅಭ್ಯಸಿಸಿ, ತನ್ನ ಸ್ವಂತದ ವಿಕಾಸವನ್ನು ತಾನೇ ಮಾಡಿಕೊಳ್ಳುವಂತೆ ಅನುವು ಮಾಡಿಕೊಡಲಾಗುತ್ತದೆ. ಗುರು ಅಥವಾ ಶಿಕ್ಷಕ ಹೆಚ್ಚಾಗಿ ಬಾಹ್ಯ ಮಾರ್ಗದರ್ಶಕ. ಆತ ಬರಿ ಕಲಿಸುವ ಕಾರ್ಯ ಕೈಕೊಳ್ಳದೆ, ತನ್ನ ಜ್ಞಾನ ನಿಧಿಯ ಪ್ರಭಾವವನ್ನು ಹರಡುತ್ತ ವಿದ್ಯಾರ್ಥಿಗಳು ಆತನ ಸ್ಫೂರ್ತಿಯಿಂದಲೆ ಆಂತರಿಕ ಹಾಗೂ ಬಾಹ್ಯ ವಿಕಾಸ ಹೊಂದುವಂತೆ ಸಹಾಯ ನೀಡುತ್ತಾನೆ. ಗುರು - ಶಿಷ್ಯರ ಮನೋವೃತ್ತಿಗಳಿಗನುಗುಣವಾಗಿಯೇ ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಸಾಧನೆ ನಡೆಯುತ್ತದೆ. ಇದು ಆಂತರಾತ್ಮಿಕ ಶಿಕ್ಷಣ ಪದ್ಧತಿ. ಇಲ್ಲಿ ವಿದ್ಯಾರ್ಥಿ ತನ್ನ ಜೀವನದ ಪರಮಾರ್ಥ ತತ್ವಕ್ಕೆ ತನ್ನನ್ನು ಅರ್ಪಿಸಿಕೊಳ್ಳುತ್ತಾನೆ. ಈ ಶಿಕ್ಷಣದ ಮೂಲಕ ನಡೆಯುವ ಎಲ್ಲಾ ಬಗೆಯ ಶೋಧವು ಗಾಢ ಅನುಭೂತಿಗೆ ಸಂಬಂಧಿಸಿದ್ದು. ಎಲ್ಲವನ್ನೂ ಅನುಭವಿಸುತ್ತ ಕಲಿಯುವುದು ಹಾಗೂ ಜೀವಿಸುವುದು. ಆಂತರಾತ್ಮಿಕ ಅನುಭೂತಿಯಲ್ಲಿಯೆ ನಿಜವಾದ ಶಕ್ತಿ ಹಾಗೂ ಸತ್ಯ ಅಡಕವಾಗಿರುತ್ತವೆ.

ಆದ್ದರಿಂದ, ಈ 'ಆಂತರಾತ್ಮಿಕ ಶಿಕ್ಷಣ' (Psychic Education) ದಲ್ಲಿ ವಿದ್ಯಾರ್ಥಿ ತನ್ನೊಳಗೇ ಇರುವ ಅಂತರಾತ್ಮನ ಶೋಧ ನಡೆಸುತ್ತ ಆತನೊಡನೆ ಒಂದಾಗಲು ಯತ್ನಿಸುವುದು ಮೊದಲ ಹೆಜ್ಜೆ. ಅಂತರಾತ್ಮನಲ್ಲಿ ವಿಶ್ವಾತ್ಮಕತೆ, ನಿಸ್ಸೀಮ ವಿಶಾಲತೆ, ನಿರಂತರ ಶಾಶ್ವತತೆಗಳಿದ್ದು, ಆತನ ಪ್ರಭಾವದಿಂದ

ವಿದ್ಯಾರ್ಥಿ ವಿಸ್ತರಿಸಿಕೊಳ್ಳುತ್ತಾನೆ, ಉನ್ನತನಾಗುತ್ತಾನೆ. ಆಗ ಆತನು ಎಲ್ಲ ವಸ್ತುಗಳಲ್ಲೂ ಎಲ್ಲ ವ್ಯಕ್ತಿಗಳಲ್ಲೂ ಜೀವಿಸತೊಡಗುತ್ತಾನೆ. ಆಗ ವ್ಯಕ್ತಿ - ವ್ಯಕ್ತಿಗಳನ್ನು ಪ್ರತ್ಯೇಕಿಸುವ ಅಡೆತಡೆಗಳೆಲ್ಲಾ ನಿರ್ನಾಮವಾಗುತ್ತವೆ. ಯಾವುದು ಮೊದಲು ಜಡವೆನಿಸಿತ್ತೋ ಅದೀಗ ಚೈತನ್ಯಭರಿತವಾಗುತ್ತದೆ. ಕಲ್ಲುಗಳಿಗೆ ಜೀವ ಬರುತ್ತದೆ, ಸಸ್ಯಗಳು ಅನುಭವಿಸುತ್ತವೆ, ಸಂಕಲ್ಪಿಸುತ್ತವೆ. ಸುಖ ದುಃಖ ಭೋಗಿಸುತ್ತವೆ. ಪ್ರಾಣಿಗಳು ಅರ್ಥವಾಗುವ ಭಾಷೆಯಲ್ಲಿ ಮಾತನಾಡುತ್ತವೆ. ಇದೆಲ್ಲ ಈ ವಿದ್ಯಾರ್ಥಿಗಳಿಗೆ ಅರ್ಥವಾಗುತ್ತದೆ. ಇದು ಅಂತರಾತ್ಮಸಿದ್ಧಿಯ ಒಂದು ಮುಖ. ಇದಕ್ಕೆ ಇನ್ನೂ ಹಲವು ಮುಖಗಳಿವೆ. ಇವು ವ್ಯಕ್ತಿಯ ಅಹಂಕಾರವನ್ನು ನಿವಾರಿಸಿ ಬಾಹ್ಯ ವ್ಯಕ್ತಿತ್ವದ ಅಡ್ಡ ಗೋಡೆಗಳನ್ನು ಕೆಡಹಿ, ದೌರ್ಬಲ್ಯವನ್ನು ಹೋಗಲಾಡಿಸಿ ವ್ಯಕ್ತಿಯ ಸಂಕಲ್ಪ ಶಕ್ತಿಯನ್ನು ಪುಷ್ಟಿಗೊಳಿಸಿ ವ್ಯಕ್ತಿ ವಿಕಾಸ ಹೊಂದಲು ನೆರವೀಯುತ್ತವೆ.

ಅಯ್ವತ್ತು ವರ್ಷಗಳ ಕಾಲ ಪ್ರಯೋಗ ನಡೆಸಿರುವ ಈ ಆಂತರಾತ್ಮಿಕ ಶಿಕ್ಷಣ ಪದ್ಧತಿಯು ಇಂದಿನ ಮಾನಸಿಕ ಶಿಕ್ಷಣದೊಂದಿಗೆ ಸಮನ್ವಯಗೊಂಡು ಭಾರತದ ಹಾಗೂ ಜಗತ್ತಿನ ಎಲ್ಲೆಡೆಗಳಲ್ಲಿ ಪ್ರತಿಷ್ಠಿತವಾಗುವ ದೇವ ಮುಹೂರ್ತ ಇಂದಲ್ಲ ನಾಳೆ ಬಂದೇ ಬರುವುದೆಂದು ಶ್ರೀ ಅರವಿಂದಾಶ್ರಮದ ಶ್ರೀ ಮಾತೆಯವರು ಭವಿಷ್ಯ ನುಡಿದಿದ್ದಾರೆ. ಈ ಬಗ್ಗೆ ಭಾರತದ ಹಾಗೂ ಇತರ ದೇಶಗಳ ಶಿಕ್ಷಣ ತಜ್ಞರು ಗಮನ ಹರಿಸಿ, ಈ ದಿಶೆಯಲ್ಲಿ ಕಾರ್ಯ ತತ್ಪರರಾದಲ್ಲಿ ಈ ದೇವ ಮುಹೂರ್ತ ಶೀಘ್ರವಾಗಿ ಘಟಿಸೀತಲ್ಲವೆ ?

15-01-1995

# ಭಕ್ತ ಪುರಂದರರ ದಾಸ ದೀಕ್ಷೆಯ ಪವಾಡ

ಎಸ್.ಆರ್. ಮಳಗಿ

ಪುರಂದರದಾಸರ ಜೀವನದಲ್ಲಿಯ ಸುಪ್ರಸಿದ್ಧ ಪವಾಡವನ್ನು ಕುರಿತ ಚಿಂತನವಿದು. ಭಗವಂತನ ಲೀಲೆ ಅದ್ಭುತ ಎಂದು ಈ ಪವಾಡವು ಎತ್ತಿ ತೋರಿಸುತ್ತದೆ. ತಪ್ಪು ದಾರಿ ಹಿಡಿದವರನ್ನು ಸರಿಯಾದ ದಾರಿಗೆ ತಂದು ಬಾಳನ್ನು ಸಾರ್ಥಕಗೊಳಿಸುವ ದೇವರ ಪವಾಡ ಪ್ರತಿಯೊಬ್ಬರ ಹೃದಯದಲ್ಲಿ ನಡೆಯುತ್ತಿರುತ್ತದೆ.

'ಈಶ್ವರಸ್ಸರ್ವಭೂತಾನಾಂ ಹೃದ್ದೇಶೇರ್ಜುನತಿಷ್ಠತಿ ।

ಭ್ರಾಮಯನ್ ಸರ್ವ ಭೂತಾನಿ ಯಂತ್ರಾರೂಢಾನಿ ಮಾಯಯಾ ॥

ಎಂದು ಗೀತೆ ಸಾರುತ್ತಿದೆ, 'ಸಂಸಾರ ಯಂತ್ರದಲ್ಲಿ ಸಿಕ್ಕಿರುವ ಚರಾಚರ ಭೂತಗಳನ್ನು ತನ್ನ ಮಾಯಾ ಶಕ್ತಿಯಿಂದ ಆಡಿಸುತ್ತ ಪರಮೇಶ್ವರನು ಸರ್ವರ ಹೃದಯದಲ್ಲಿ ಸ್ಥಿತನಾಗಿದ್ದಾನೆ'. ಮಾನವನ ಬಾಳಿಗೆ ದೇವರ ನೆರವೇ ನೆರವು. ನಮ್ಮ ನಮ್ಮ ಹೃದಯಗಳಲ್ಲಿರುವ ಸದಸದ್ವಿವೇಕವೇ ದೇವರು. ಅದೇ ದಾರಿ ತೋರುವ ದೀಪ. ಈ ದರ್ಶನವನ್ನು ಪುರಂದರದಾಸರು ತಮ್ಮ ನಡುಹರೆಯದಲ್ಲಿ ಕಂಡುಕೊಂಡರೆಂಬುದೇ ಈ ಪವಾಡ. ಕರ್ನಾಟಕ ಸಂಗೀತದ ಜನಕರೆನಿಸಿದ ಇವರು ನಾರದ ಮಹರ್ಷಿಯ ಅವತಾರವೆಂದೂ ಜನಜನಿತವಾಗಿದೆ. ಇವರ ಕೀರ್ತನೆ, ಸುಳಾದಿ, ಉಗಾಭೋಗಗಳ ಒಟ್ಟು ಸಂಖ್ಯೆ ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ ಎಂದರೆ ಅವು ಎಣಿಕೆಗೆ ಸಿಕ್ಕಲಾರವು ಎಂದರ್ಥ. ಈ ಮೊತ್ತದ ಕೃತಿ ರಚನೆಯೂ ಒಂದು ಪವಾಡವೇ. ಪುರಂದರರಿಗೆ ದಾಸ ದೀಕ್ಷೆ ಕೊಟ್ಟ ಗುರು ವ್ಯಾಸರಾಯರೇ 'ದಾಸರೆಂದರೆ ಪುರಂದರದಾಸರಯ್ಯ' ಎಂದು ಹಾಡಿ ಕೊಂಡಾಡಿದ್ದಾರೆ. ಇವರ ಕೃತಿಗಳನ್ನು 'ಪುರಂದರೋಪನಿಷತ್ತು' ಎಂದು ಪ್ರಶಂಸಿಸಿದ್ದಾರೆ.

ಈ ಮಹಾನುಭಾವರು ಬದುಕಿ ಬಾಳಿದ್ದು ಸುಮಾರು ನಾಲ್ಕು ನೂರು ವರುಷಗಳ ಹಿಂದೆ. ವಿಜಯನಗರದ ಕೃಷ್ಣದೇವರಾಯನ ವೈಭವದ ಕಾಲದಲ್ಲಿ. ಇವರು ಕಾಲವಾದುದು ವಿಜಯನಗರ ಸಾಮ್ರಾಜ್ಯದ ಪತನ ಸನ್ನಿಹಿತವಾದ ಸಂದರ್ಭದಲ್ಲಿ. ಆದರೆ ಇವರ ಜೀವನ ವಿವರಗಳು ಖಚಿತವಾಗಿ ತಿಳಿದಿಲ್ಲ. ಜನಜನಿತವಾಗಿ ತಿಳಿದು ಬಂದ ಕೆಲವು ವಿವರಗಳು ಹೀಗಿವೆ : ಇವರ ಜನ್ಮ ಸ್ಥಳ ಪುರಂದರಗಡ. ಇವರ ಪೂರ್ವಾಶ್ರಮದ ಹೆಸರು ಶ್ರೀನಿವಾಸನಾಯಕ. ತಂದೆಯ ಹೆಸರು ವರದಪ್ಪನಾಯಕ. ಹೆಂಡತಿಯ ಹೆಸರು ಸರಸ್ವತಿ. ತಂದೆಯ ಕಾಲದಿಂದ ನಡೆದು ಬಂದಿದ್ದ ಚಿನಿವಾರಿಕೆಯ ವ್ಯವಹಾರದಲ್ಲಿ ಅಪಾರ ಸಂಪತ್ತನ್ನು ಗಳಿಸಿ ಇವರು 'ನವಕೋಟಿ ನಾರಾಯಣ' ಎನಿಸಿದ್ದರು. ಹಾಗೆಯೇ ಭಾರಿ ಜಿಪುಣರು. ಇಂಥವರು ಸಂಸಾರದ ಎಲ್ಲಾ ಮೋಹವನ್ನು ತೊರೆದು ತಮ್ಮ ಸೊತ್ತನ್ನೆಲ್ಲಾ ಬಡವರಿಗೆ ದಾನ ಮಾಡಿ ಗೋಪಾಳ ಬುಟ್ಟಿ ಹಿಡಿದುಕೊಂಡು ದಾಸರಾದರೆಂಬುದು ಸಾಮಾನ್ಯ ಸಂಗತಿಯೇ? ಅದಕ್ಕೊಂದು ಕಥೆ ಹುಟ್ಟಿಕೊಂಡಿತು. ಅದು ಅವರ ಹೆಂಡತಿ ಸರಸ್ವತಿಯ ಮೂಗುತಿಯ ಕಥೆ. ಈ ಕಥೆಯ ಪ್ರಕಾರ ಭಗವಂತನೇ ಒಬ್ಬ ಬಡ ಬ್ರಾಹ್ಮಣನ ರೂಪದಲ್ಲಿ ಬಂದು ಸರಸ್ವತಿಯಿಂದ ಮೂಗುತಿ ದಾನ ಪಡೆದ. ಕಡು ಲೋಭಿಯಾಗಿದ್ದ ಗಂಡನಿಗೆ ಇದರ ಸುಳಿವು ಹತ್ತಿತು. ಆಗ ಆತ ರೋಷಾವೇಶಗೊಂಡಾಗ ಅದಕ್ಕೆ ಹೆದರಿ ಸರಸ್ವತಿ ಸಾಯಲೆಂದು ಕುಡಿಯ ಬೇಕೆಂದಿದ್ದ ವಿಷದ ಬಟ್ಟಲಲ್ಲಿ ಆ ಮೂಗುತಿ ಕಂಡಿತು ! ಇದು ಶ್ರೀನಿವಾಸ ನಾಯಕನ ಹೃದಯ ಪರಿವರ್ತನೆಗೆ ಕಾರಣ ಎಂದು ಈ ಕಥೆ ಹೇಳುತ್ತದೆ. ಆದರೆ ಅಂಗಡಿಯಲ್ಲಿ ಭದ್ರವಾಗಿ ಬೀಗ ಹಾಕಿ ಇರಿಸಿದ್ದ ಪೆಟ್ಟಿಗೆಯಿಂದ ಮೂಗುತಿ ವಿಷದ ಬಟ್ಟಲಿಗೆ ಬಂದದ್ದು ಹೇಗೆ ? ಇದು ಪವಾಡವನ್ನು ನಂಬದವರ ಪ್ರಶ್ನೆ. ಇದಕ್ಕೆ

ಪರಿಹಾರವನ್ನು ಒಬ್ಬ ಹಿರಿಯ ನಾಟಕಕಾರರು ಸೂಚಿಸಿದ್ದಾರೆ. ಅದು ಜಾಣ ರೀತಿಯಲ್ಲಿ ಕಥೆಗೆ ವಾಸ್ತವತೆಯ ತಿರುಹನ್ನೂ ಕೊಟ್ಟಿದೆ. ಆದರೆ ನನಗನಿಸುವಂತೆ, ಭಗವಂತನ ಲೀಲೆ ಅದ್ಭುತವೆನಿಸಲು ಆತ ಹೊರಗಿನಿಂದ ಬರುವ ಅಗತ್ಯವೇನಿಲ್ಲ. ಆ ಬಡ ಬ್ರಾಹ್ಮಣನು ನಿಜವಾಗಿಯೂ ಬಂದು ಸರಸ್ವತಿಯ ಮುಂದೆ ತನ್ನ ಬಡತನದ ಗೋಳನ್ನು ತೋಡಿಕೊಂಡು ಆಕೆಯಿಂದ ಮೂಗುತಿ ದಾನ ಪಡೆದಿದ್ದಿರಬಹುದು. ಆ ಮೂಗುತಿಯನ್ನು ವಿಷದ ಬಟ್ಟಲಿಗೆ ಬರಿಸುವುದಾಗಲಿ, ತರಿಸುವುದಾಗಲಿ ಇದಾವುದೂ ನಡೆದಿರಲಿಕ್ಕಿಲ್ಲ. ಇಷ್ಟು ಕಾಲ ಪತಿಯನ್ನು ಅನುಸರಿಸುತ್ತ ಬಂದಿದ್ದ ಸರಸ್ವತಿ ಪತಿಯ ಕ್ರೋಧಕ್ಕೆ ಪಕ್ಕಾಗಿ, ಹೌಹಾರಿ ಹೋಗಿ ವಿಷ ಕುಡಿದು ಜನ್ಮನೀಗಲು ಯತ್ನಿಸುತ್ತಿದ್ದಂತೆಯೆ, ಅದನ್ನು ಪ್ರತ್ಯಕ್ಷ ಕಂಡ ಶ್ರೀನಿವಾಸನಾಯಕನಿಗೆ ಸತ್ಯದ ಸಾಕ್ಷಾತ್ಕಾರವಾಗಿರಬೇಕು. ಬಡವರ ಬಗ್ಗೆ ತನ್ನಲ್ಲಿ ಎಂದೆಂದೂ ಕಾಣದಿದ್ದ ಮರುಕ, ದಾನ ಶೀಲತೆ, ಔದಾರ್ಯ ಮುಂತಾದ ದೈವೀ ಭಾವಗಳು ಆತನಿಗೆ ತನ್ನ ಸಾಧ್ವೀಮಣಿಯಾದ ಮಡದಿಯಲ್ಲಿ ಕಂಡವು. ಅಂಥವಳು ತನ್ನ ಕಡು ಲೋಭ ಮತ್ತು ಕಠೋರ ವರ್ತನೆಗೆ ಹೇಸಿ ವಿಷ ಕುಡಿದು ಜನ್ಮನೀಗಲು ಯತ್ನಿಸಿದ್ದನ್ನು ಕಂಡಾಗಲೇ ಆತ ಅವಾಕ್ಕಾದ. ಅದೇ ಆತನ ಹೃದಯ ಪರಿವರ್ತನೆಗೆ ಕಾರಣವಾಯ್ತು. ಜೀವನದುದ್ದಕ್ಕೂ ತನ್ನ ಚಿನಿವಾರಿಕೆಯ ಕಠೋರ ವ್ಯವಹಾರದ ಬಗ್ಗೆ ಒಳಗೊಳಗೇ ಶ್ರೀನಿವಾಸನಾಯಕನಲ್ಲಿ ಚಿಂತನ ನಡೆದಿರಬೇಕು. ಕಾಲ ಪಕ್ವವಾಗಬೇಕಿತ್ತು ಅಷ್ಟೆ. ಭಗವಂತ ನಮ್ಮೊಳಗಿದ್ದುಕೊಂಡೇ ಇಂಥದೊಂದು ಸನ್ನಿವೇಶವನ್ನೊದಗಿಸಿ ಜೀವನದಲ್ಲಿ ವಿಪ್ಲವವನ್ನು ಎಸಗುತ್ತಾನೆ. ಇದೇ ಭಗವಂತನ ಲೀಲೆ, ಪವಾಡ. ಅನಂತರ ಶ್ರೀನಿವಾಸನಾಯಕನು ತನ್ನ ಹೆಂಡತಿ ಮತ್ತು ನಾಲ್ವರು ಮಕ್ಕಳೊಂದಿಗೆ ವಿಜಯನಗರಕ್ಕೆ ಹೋಗಿ ದಾಸ ದೀಕ್ಷೆ ಹೊಂದಿ ಪುರಂದರದಾಸರಾದರು. ಅನಂತರ ಅವರ ಮೂವರು ಗಂಡು ಮಕ್ಕಳೂ ದಾಸ ದೀಕ್ಷೆ ಪಡೆದರಂತೆ - ಇದೆಲ್ಲ ಪವಾಡವೇ.

೩-೨-೧೯೮೪

ಬೆಂಗಳೂರು ಆಕಾಶವಾಣಿಯಿಂದ ದಿ. ೩-೨-೧೯೮೪ ರಂದು ಬೆಳಗ್ಗೆ ೬-೩೦ ಗಂಟೆಗೆ ಬಿತ್ತರಿಸಲಾದ ಚಿಂತನ.

ಪರಿಹಾರವನ್ನು ಒಬ್ಬ ಹಿರಿಯ ನಾಟಕಕಾರರು ಸೂಚಿಸಿದ್ದಾರೆ. ಅದು ಜಾಣ ರೀತಿಯಲ್ಲಿ ಕಥೆಗೆ ವಾಸ್ತವತೆಯ ತಿರುಹನ್ನೂ ಕೊಟ್ಟಿದೆ. ಆದರೆ ನನಗನಿಸುವಂತೆ, ಭಗವಂತನ ಲೀಲೆ ಅದ್ಭುತವೆನಿಸಲು ಆತ ಹೊರಗಿನಿಂದ ಬರುವ ಅಗತ್ಯವೇನಿಲ್ಲ. ಆ ಬಡ ಬ್ರಾಹ್ಮಣನು ನಿಜವಾಗಿಯೂ ಬಂದು ಸರಸ್ವತಿಯ ಮುಂದೆ ತನ್ನ ಬಡತನದ ಗೋಳನ್ನು ತೋಡಿಕೊಂಡು ಆಕೆಯಿಂದ ಮೂಗುತಿ ದಾನ ಪಡೆದಿದ್ದಿರಬಹುದು. ಆ ಮೂಗುತಿಯನ್ನು ವಿಷದ ಬಟ್ಟಲಿಗೆ ಬರಿಸುವುದಾಗಲಿ, ತರಿಸುವುದಾಗಲಿ ಇದಾವುದೂ ನಡೆದಿರಲಿಕ್ಕಿಲ್ಲ. ಇಷ್ಟು ಕಾಲ ಪತಿಯನ್ನು ಅನುಸರಿಸುತ್ತ ಬಂದಿದ್ದ ಸರಸ್ವತಿ ಪತಿಯ ಕ್ರೋಧಕ್ಕೆ ಪಕ್ಕಾಗಿ, ಹೌಹಾರಿ ಹೋಗಿ ವಿಷ ಕುಡಿದು ಜನ್ಮ ನೀಗಲು ಯತ್ನಿಸುತ್ತಿದ್ದಂತೆಯೆ, ಅದನ್ನು ಪ್ರತ್ಯಕ್ಷ ಕಂಡ ಶ್ರೀನಿವಾಸನಾಯಕನಿಗೆ ಸತ್ಯದ ಸಾಕ್ಷಾತ್ಕಾರವಾಗಿರಬೇಕು. ಬಡವರ ಬಗ್ಗೆ ತನ್ನಲ್ಲಿ ಎಂದೆಂದೂ ಕಾಣದಿದ್ದ ಮರುಕ, ದಾನ ಶೀಲತೆ, ಔದಾರ್ಯ ಮುಂತಾದ ದೈವೀ ಭಾವಗಳು ಆತನಿಗೆ ತನ್ನ ಸಾಧ್ವೀಮಣಿಯಾದ ಮಡದಿಯಲ್ಲಿ ಕಂಡವು. ಅಂಥವಳು ತನ್ನ ಕಡು ಲೋಭ ಮತ್ತು ಕಠೋರ ವರ್ತನೆಗೆ ಹೇಸಿ ವಿಷ ಕುಡಿದು ಜನ್ಮ ನೀಗಲು ಯತ್ನಿಸಿದ್ದನ್ನು ಕಂಡಾಗಲೇ ಆತ ಅವಕ್ಕಾದ. ಅದೇ ಆತನ ಹೃದಯ ಪರಿವರ್ತನೆಗೆ ಕಾರಣವಾಯ್ತು. ಜೀವನದುದ್ದಕ್ಕೂ ತನ್ನ ಚಿನಿವಾರಿಕೆಯ ಕಠೋರ ವ್ಯವಹಾರದ ಬಗ್ಗೆ ಒಳಗೊಳಗೇ ಶ್ರೀನಿವಾಸನಾಯಕನಲ್ಲಿ ಚಿಂತನ ನಡೆದಿರಬೇಕು. ಕಾಲ ಪಕ್ವವಾಗಬೇಕಿತ್ತು ಅಷ್ಟೆ. ಭಗವಂತ ನಮ್ಮೊಳಗಿದ್ದುಕೊಂಡೇ ಇಂಥದೊಂದು ಸನ್ನಿವೇಶವನ್ನೊದಗಿಸಿ ಜೀವನದಲ್ಲಿ ವಿಪ್ಲವವನ್ನು ಎಸಗುತ್ತಾನೆ. ಇದೇ ಭಗವಂತನ ಲೀಲೆ, ಪವಾಡ. ಅನಂತರ ಶ್ರೀನಿವಾಸನಾಯಕನು ತನ್ನ ಹೆಂಡತಿ ಮತ್ತು ನಾಲ್ವರು ಮಕ್ಕಳೊಂದಿಗೆ ವಿಜಯನಗರಕ್ಕೆ ಹೋಗಿ ದಾಸ ದೀಕ್ಷೆ ಹೊಂದಿ ಪುರಂದರದಾಸರಾದರು. ಅನಂತರ ಅವರ ಮೂವರು ಗಂಡು ಮಕ್ಕಳೂ ದಾಸ ದೀಕ್ಷೆ ಪಡೆದರಂತೆ - ಇದೆಲ್ಲ ಪವಾಡವೇ.

೩-೨-೧೯೮೪

ಬೆಂಗಳೂರು ಆಕಾಶವಾಣಿಯಿಂದ ದಿ. ೩-೨-೧೯೮೪ ರಂದು ಬೆಳಗ್ಗೆ ೬-೩೦ ಗಂಟೆಗೆ ಬಿತ್ತರಿಸಲಾದ ಚಿಂತನ.